# ರುಕ್ಮಿಣೀವಾದ

(ಹರಿದಾಸ ಸಾಹಿತ್ಯ ಕೃತಿಗಳು)

ಶ್ರೀಮತಿ ರುಕ್ಮಿಣೀ ಗಿರಿಮಾಜಿ ಎಂ.ಎ.,



# ರುಕ್ಮಿಣೀವರದ

(ಹರಿದಾಸ ಸಾಹಿತ್ಯ ಕೃತಿಗಳು)

ಶ್ರೀಮತಿ ರುಕ್ಮಿಣಿ ಗಿರಿಮಾಜಿ ಎಂ.ಎ.

ಪ್ರಕಾಶಕರು

ಶ್ರೀಮತಿ ಗಿರಿಮಾಜಿ ವೆಂಕೂಬಾಯಿ

ನಂ. 156, 13ನೇ "ಬಿ" ಮುಖ್ಯ ರಸ್ತೆ

ಮತ್ತೀಕೆರೆ ಲೇಔಟ್, ಗೋಕುಲ ಮೊದಲ ಹಂತ

ಬೆಂಗಳೂರು - 560 054

RUKMINI VARADA :- A Collection of devotional songs Written by Noted writer of Karnataka Smt Rukmini Girimaji. M.A. Published by Smt. Girimaji Venkubai, No. 156, 13th 'B' Main Road, Mathikere Layout, Gokula Frist Stage, Bangalore - 560 054
No. of Pages-84.

First Print - 1984



Printed At ;-
LIBERTY PRINTERS
171/1, Cottonpet
Bangalore - 560053

# ಅನುಗ್ರಹ ವಚನ

**ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಸ್ವಾಮೀಜಿ**
ಶ್ರೀ ಸುಬ್ರಹ್ಮಣ್ಯ ಮಠ
ಜಗದ್ಗುರು ಮಧ್ವಾಚಾರ್ಯ ಸಂಸ್ಥಾನ
ಸುಬ್ರಹ್ಮಣ್ಯ – 574 238 (ದ.ಕ.)

ಮೊಕ್ಕಾಂ : ಬೆಂಗಳೂರು
ತಾ|| 13 – 8 – 1984

ಶ್ರೀ

ಭಕ್ತಿ ಮಾರ್ಗ ಪ್ರಚೋದನೆಗೆ ದಾಸ ಸಾಹಿತ್ಯ ನೀಡಿದ ಸಹಕಾರ ಅನುಪಮವಾದುದು. ಭಗವಂತನ ಬಗೆಗೆ ಹಂಬಲಿಸಿ, ಆತನ ಕುರಿತಾಗಿ ದಾಸವರೇಣ್ಯರು ರಚಿಸಿರುವ ಹಾಡುಗಳು ಪಂಡಿತ ಪಾಮರರೆನ್ನದೆ ಸಕಲ ಸಜ್ಜನರಿಗೂ ಮಂಗಳಕರವಾದುದು.

ಪರಿಚಿತರಾದ ಶ್ರೀಮತಿ ರುಕ್ಮಿಣಿ ಗಿರಿರಾಜಿಯವರು ದಾಸ ಸಾಹಿತ್ಯದ ಆದರ್ಶವನ್ನು ಎದುರಿಟ್ಟುಕೊಂಡು ರಚಿಸಿರುವ ದೇವರ ನಾಮುಗಳನ್ನು ಕಂಡಿದ್ದೇನೆ. ಪರಮಾತ್ಮನ ಬಗೆಗೆ ವಿಶ್ವಾಸ ಭಕ್ತಿಯಿಂದ ಅವರು ರಚಿಸಿರುವ ಈ ಪದ್ಯಗಳು ತುಂಬಾ ಸುಂದರವಾಗಿವೆ. ಇವರಿಗೆ ದೇವರು ಶುಭವನ್ನು ನೀಡಲಿ, ಈ ಹಾಡುಗಳು ಎಲ್ಲ ಜನರ ನಾಲಿಗೆಗಳಲ್ಲಿ ನಲಿದಾಡಲಿ ಎಂದು ಹಾರೈಸುವೆ.

ಇತಿ,

(ಸಹಿ) ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಸ್ವಾಮೀಜಿ

## ಲೇಖಕಿಯಿಂದ :-

ತಿರುಮಲೆಯ ಶ್ರೀನಿವಾಸ ನಮ್ಮ ಮನೆ ದೇವರು, ಕುಲದೇವರು. ಚಿಕ್ಕ ವಯಸ್ಸಿನಿಂದಲೇ ಶ್ರೀನಿವಾಸನ ಬಗೆಗೆ ಭಕ್ತಿ ಭಾವನೆಯನ್ನು ಬೆಳೆಸಿದವರು ನಮ್ಮ ಮಾತೃಶ್ರೀಯವರು. ಇಂದಿಗೂ ನವರಾತ್ರಿಯಲ್ಲಿ ಅವರು ಹೇಳುವ ಏರಿ ಆಚಾರ್ಯರ "ಶ್ರೀನಿವಾಸ ಕಲ್ಯಾಣ" ಚಿತ್ತಾಕರ್ಷಕ. ಅದನ್ನು ಕೇಳಿ ತಿರುಪತಿಗೆ ಯಾತ್ರೆ ಮಾಡಿ ಮಾಡಿ, ಆ ಸ್ವಾಮಿ ಪುಷ್ಕರಿಣಿ, ಆ ದೇವಾಲಯ ಆ ಹೇಮಗೋಪುರ, ವಿಮಾನ ಶ್ರೀನಿವಾಸ, ಬಂಗಾರದ ಬಾಗಿಲು ಜಗತ್ತಿಗೇ ಆಕರ್ಷಕನಾದ ಶ್ರೀನಿವಾಸನ ದಿವ್ಯಮಂಗಳ ವಿಗ್ರಹ, ಪಾಪನಾಶಿನಿ, ಗೋಗರ್ಭ ತೀರ್ಥಗಳು, ಮನದಲ್ಲಿ ಅಚ್ಚೊತ್ತಿ, ಕೂತರೆ, ನಿಂತರೆ, ಮಲಗಿದರೆ "ಗೋವಿಂದಾ" ಎಂಬ ಭಕ್ತರ ಮೊರೆ ನಾಡಿನಾಡಿಗಳಲ್ಲಿ ಸ್ಪಂದಿಸಿ ಜೀವನವನ್ನು ಪಾವನಗೊಳಿಸಿದೆ.

ಹೀಗೆಯೇ, ಇದೇ ಭಕ್ತಿಭಾವವೇ ಮೈಗೂಡಿರಲು ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಶ್ರೀನಿವಾಸನ ಪರವಾದ ಸ್ತುತಿಗಳು ತಾವಾಗಿಯೇ ಮೂಡಿ ಬರತೊಡಗಿದವು. ಮನದಲ್ಲಿ ಮೂಡಿದ್ದು ಕಾಗದದ ಮೇಲೂ ಮೂಡಿತು. ಅಲ್ಲೊಂದು, ಇಲ್ಲೊಂದು, ಚೂರು ಕಾಗದಗಳ ಮೇಲೆ ಮೂಡಿದ ಕೃತಿಗಳು ಒಂದುನೂರಾದವು. ನೂರೆಂಟು ಕೃತಿಗಳ ಹಾರ ಮಾಡಲು ಸಂಕಲ್ಪಿಸಿ ಮಾಡಿದ್ದಾಯಿತು. ಗೆಳತಿಯರು ಒಟ್ಟುಗೂಡಿಸಿ ಒಂದು ಪುಸ್ತಕದಲ್ಲಿ ಬರೆದಿಟ್ಟರು. ಇದೇ ತರುಣದಲ್ಲಿಯೇ ನಮ್ಮ ಆತ್ಮೀಯರೊಬ್ಬರು ಬೆಟ್ಟದ ಮೇಲೆ ಕಲ್ಯಾಣ ಮಹೋತ್ಸವವನ್ನು ನೆರವೇರಿಸಿದರು. ಇಪ್ಪತ್ತು ವರ್ಷಗಳ ಹಿಂದೆ ಈಗಿನಷ್ಟು ಜನ ಸಂಮರ್ದವಿರಲಿಲ್ಲ. ನಾವುಗಳು ಬೆಳಗಿನ ಜಾವ ಎರಡು

ಘಂಟೆಗೇ ಎದ್ದು, ಕಪಿಲತೀರ್ಥದಲ್ಲಿ ಮಿಂದು, ಈ ಹಾಡುಗಳನ್ನು ಹೇಳಿಕೊಳ್ಳುತ್ತಾ ಬೆಟ್ಟವೇರತೊಡಗಿದೆವು. ಮಹಾದ್ವಾರಕ್ಕೆ ಬರುವ ವೇಳೆಗೆ ಮಂಗಳ ಮುಗಿದಿತ್ತು. ನಂತರ ಶ್ರೀನಿವಾಸನ ಪಾದಾರವಿಂದಗಳಲ್ಲಿ ಈ ಗೀತಗಳನ್ನು ಅರ್ಪಿಸಿದೆವು.

ಇವು ಭಕ್ತಿಭಾವದಿಂದ ತಾವಾಗಿಯೇ ಹೊರಹೊಮ್ಮಿದ ಗೀತೆಗಳಾದ್ದರಿಂದ ಕಾವ್ಯಮೀಮಾಂಸೆಯ ನಿಕಷಕ್ಕೆ ಸಿಲುಕಲಾರವೇನೋ. ಬಹಳಷ್ಟು ಜನ ಭಕ್ತಿಪೂರ್ವಕವಾಗಿ ಇವುಗಳನ್ನು ಹಾಡುತ್ತಿರುವುದಂತೂ ನಿಜ.

ಇಪ್ಪತ್ತು ವರ್ಷಗಳ ನಂತರ ನಮ್ಮ ಸಹೃದಯ ಸ್ನೇಹಿತರು ಇವುಗಳನ್ನು ಅಚ್ಚು ಮಾಡಿಸಲು ಆಗ್ರಹಪಡಿಸಿದರು. ಅದರಲ್ಲೂ ಶ್ರೀಮತಿ ರಾಜಲಕ್ಷ್ಮಿ ಮತ್ತು ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರು ಕರಡುಪ್ರತಿಯನ್ನು ತಿದ್ದುವುದರಿಂದ ಮೊದಲುಗೊಂಡು, ಅಚ್ಚಿನ ಮನೆಗೆ ಅಲೆದು ಪ್ರಕಟಣೆಯ ಸಂಪೂರ್ಣ ಭಾರವನ್ನು ಹೊತ್ತು ಬಿಡುಗಡೆಯನ್ನು ಮಾಡಿಸುತ್ತಿದ್ದಾರೆ. ಶ್ರೀಗಿರಿಯ ದೊರೆ ಶ್ರೀನಿವಾಸನು ದಂಪತಿಗಳಿಗೆ ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸಿ ಅವರನ್ನು ವಂದಿಸುತ್ತೇನೆ. ಎಂದಿನಂತೆ ನಮ್ಮ ಮಾತೃಶ್ರೀ ಗಿರಿಮಾಜಿ ವೆಂಕೂಬಾಯಿಯವರು ಪ್ರಕಾಶನದ ಭಾರ ವಹಿಸಿಕೊಂಡಿದ್ದಾರೆ. ತಾಯಿದೇವರಿಗೆ ನನ್ನ ನಮನ. ಭಗವಂತ ಅವರಿಗೆ ಸಂಪೂರ್ಣ ಆಯುರಾರೋಗ್ಯ ಭಾಗ್ಯಗಳನ್ನಿತ್ತು, ಇದೇ ರೀತಿ ನನ್ನನ್ನು ಪ್ರೋತ್ಸಾಹಿಸುತ್ತಿರಲಿ ಎಂದು ಪ್ರಾರ್ಥಿಸುತ್ತೇನೆ.

ಇನ್ನು ಇದನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಲಿಬರ್ಟಿ ಮುದ್ರಣಾಲಯದವರಿಗೂ, ಆಕರ್ಷಕ ಮುಖಚಿತ್ರವನ್ನು ಬರೆದು ಕೊಟ್ಟ ಕಲಾವಿದ ಪ್ರಸನ್ನಕುಮಾರ್ ಅವರಿಗೂ ನನ್ನೆಲ್ಲ ಆತ್ಮೀಯರಿಗೂ ವಂದನೆಗಳು. ಕರ್ನಾಟಕದ ಜನತೆ ಇಂತಹ ಭಕ್ತಿ ಪರವಾದ ಗೀತೆಗಳನ್ನು ಸಂತೋಷದಿಂದ ಬರಮಾಡಿಕೊಳ್ಳುತ್ತಾರೆ ಎಂದು ಆಶಿಸುವ.

4–8–1984
ಬೆಂಗಳೂರು

— ರುಕ್ಮಿಣೀ ಗಿರಿಮಾಜಿ

## ಒಂದು ಮಾತು:—

ಹರಿದಾಸ ಸಾಹಿತ್ಯದ ಚಿರಂತನ ಸಾಧನೆಗೆ ಬದುಕಿನಿಡೀ ಶ್ರದ್ಧೆಯಿಂದ ದುಡಿದ ಮಹಾನುಭಾವರ ಪುಣ್ಯವಿಶೇಷವೇ ಇಂದು ಈ ಸಾಹಿತ್ಯದ ಸಮೃದ್ಧ ರೂಪವಾಗಿ, ವರಪ್ರಸಾದವಾಗಿ ನಮಗೆ ಲಭ್ಯವಾಗುತ್ತಿದೆ. ಹೆಜ್ಜೆಯಿಟ್ಟಲ್ಲೆಲ್ಲಾ ಹರಿದಾಸ ಸಾಹಿತ್ಯದ ಹುಲುಸಾದ ಬೆಳೆಯನ್ನು ಬೆಳೆದ ಅಪರೋಕ್ಷ ಜ್ಞಾನಿಗಳ ಸಾಲಿನಲ್ಲಿ ಹರಪನಹಳ್ಳಿ ಭೀಮವ್ವ, ಹೆಳವನಕಟ್ಟೆ ಗಿರಿಯಮ್ಮ ಮುಂತಾದ ಸುಸಂಸ್ಕೃತ ಮಹಿಳೆಯರೂ ಸಹ ಅಮರರಾಗಿ ಬೆಳಗುತ್ತಿದ್ದಾರೆ. ಆ ಸ್ಫೂರ್ತಿಮೂರ್ತಿಗಳ ಪ್ರೇರಣೆಯಿಂದ ಮುದಿತೋದಿತರಾಗಿ, ಕೃಷ್ಣನಲ್ಲಿ ಅನನ್ಯ ಭಕ್ತಿಭಾವದಿಂದ ಹಾಡಿದ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರ ಭಕ್ತಿಗೀತ ಲಹರಿಯೇ ಈ "ರುಕ್ಮಿಣೀವರದ" ಕೃತಿ.

ಶ್ರೀಮತಿ ರುಕ್ಮಿಣಿ ಗಿರಿಮಾಜಿ ಕನ್ನಡದ ಸುಪ್ರಸಿದ್ಧ ಸಾಹಿತಿಗಳು. ಕಥೆ, ಕಾದಂಬರಿಗಳಿಂದ ಹಿಡಿದು ಚಿಂತನ ಶೀಲ ಸಾಹಿತ್ಯದವರೆಗೂ ತಮ್ಮ ಅಭಿರುಚಿ, ಅಧ್ಯಯನ, ಅಭಿವ್ಯಕ್ತಿಗಳನ್ನು ಹಮ್ಮಿಕೊಂಡಿರುವ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರು ಹರಿದಾಸ ಸಾಹಿತ್ಯದ ಬಗ್ಗೆ ಅಪಾರ ಪ್ರಭುತ್ವ ಇರುವವರು. ಅವರ ಇಲ್ಲಿಯ ಕೃತಿಗಳಲ್ಲಿ ಭಕ್ತಿಯ ಸಂಪೂರ್ಣ ಶಕ್ತಿ ಮಿಂಚಿನಂತೆ ಹೊಳೆಯುತ್ತಿದೆ. ಒಂದೊಂದು ಹಾಡಿನಲ್ಲೂ ನಾದಮಾಧುರ್ಯ ಭಾಷಾಗಾಂಭೀರ್ಯಗಳ ಸಹಸ್ಪಂದನವಿದೆ! ಹೃದಯಕ್ಕೆ ತಟ್ಟುವ ಇಂಪಿನ ವಾತ್ಸಲ್ಯಮಯ ವಾಕ್ಯಗಳಿವೆ. ಕೃಷ್ಣನ ಪದಚರಣಗಳಲ್ಲಿ ಸರ್ವವನ್ನು ಕಾಣುವ ಸರ್ವಸಮರ್ಪಣ ಭಾವವಿದೆ. ಶಾಸ್ತ್ರಸಂಸ್ಕಾರದಿಂದ ಹದಗೊಂಡಿರುವ ಶಾಸ್ತ್ರೀಯ ಹಿನ್ನಲೆಯಿರುವ ಈ ಕೃತಿ, ಇತ್ತೀಚಿನ ಹರಿದಾಸ ಸಾಹಿತ್ಯ

ದಲ್ಲಿ ಅತ್ಯಂತ ಸಧೃಢವಾದ ಹಾಗೂ ಸುಂದರ ಬಂಧುರವೆನಿಸಿರುವ ಅಪೂರ್ವ ಕೃತಿಯಾಗಿದೆ. ಹರಿದಾಸ ಸಾಹಿತ್ಯದ ಅಭ್ಯಾಸಿಗಳಿಗೆ ವಿಶೇಷ ಸ್ಫೂರ್ತಿಯನ್ನು ಚೈತನ್ಯವನ್ನು, ಆದರ್ಶವನ್ನು ನೀಡುವ ರುಕ್ಮಿಣೀವರದ ಕೃತಿಯನ್ನು ಕನ್ನಡ ಜನತೆಗೆ ನೀಡಿರುವ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರು ಈ ಕಾಲದಲ್ಲೂ ಶುದ್ಧ ಹೃದಯದ, ಸ್ವಾತಿಕಶಕ್ತಿಯ ಶಾಸ್ತ್ರೀಯ ರೂಪದ ಅಲೌಕಿಕ ಸಾಹಿತ್ಯ ವನ್ನು ಸೃಷ್ಟಿಸಬಹುದೆಂಬ ಭರವಸೆಯನ್ನು ಸ್ಪಷ್ಟವಾಗಿ ಮೂಡಿಸಿದ್ದಾರೆ.

ಎಲ್ಲ ಕಾಲಕ್ಕೂ ನಿಲ್ಲಬಲ್ಲ ಶಾಶ್ವತ ಮೌಲ್ಯದ ಇಂತಹ ಇನ್ನು ಹತ್ತಾರು ಕೃತಿಗಳನ್ನು ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರು ನೀಡಲಿ ಎಂದಷ್ಟೇ ಹಾರೈಸುವ.

— ಅರಳುಮಲ್ಲಿಗೆ ಪಾರ್ಥಸಾರಥಿ

## ಅರ್ಪಣೆ

ಇಷ್ಟ ದೈವನೂ,
ಕುಲದೇವನೂ ಆದ
ಶ್ರೀ ಶ್ರೀನಿವಾಸನ
ಪಾದಾರವಿಂದಗಳಲ್ಲಿ

## ಗಣಪತಿ ಸ್ತೋತ್ರ

ಶ್ರೀಶನಂಘ್ರಿ ಸರೋಜ ಭೃಂಗವು
ಹೇಶಸಂಭವ ಮನ್ಮನದೊಳು ಪ್ರ
ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ
ನೀ ಸಲಹು ಸಜ್ಜನರ ವೇದ
ವ್ಯಾಸ ಕರುಣಾ ಪಾತ್ರ ಮಹದಾ
ಕಾಶಪತಿ ಕರುಣಾಳು ಕೈಪಿಡಿದೆನ್ನನುದ್ಧರಿಸು

(ಹರಿಕಥಾಮೃತಸಾರ)

## ಹೇ ಗೋವಿಂದ

ಹೇ ದಯಾಲವಾಲಾ ಗೋವಿಂದಾ
ಹೇ ಮುರಳೀ ಲೋಲಾ ಮುಕುಂದಾ ॥ ಪ ॥

ನೀಲ ನೀರದ ಘನ ಕಾಯಾ ಸುಗಾತ್ರಾ
ಶೀಲ ಗುಣ ಸಂಪನ್ನ ನೀರಜ ನೇತ್ರಾ
ವನಮಾಲಾಧರಾ ಶ್ರೀ ಪದ್ಮಿನೀವರಾ
ಜನ ತಾಪಹರಾ ಶ್ರೀಶ ದಾನವ ಸಂಹಾರಾ ॥ ೧ ॥

ಸಪ್ತ ಶೈಲವಾಸಾ ಭಕ್ತಮನಾವಾಸ
ತಪ್ತ ಮನ ತ್ರಾಣಾ ಭವಭಯ ಹರಣಾ
ವರದವೇಂಕಟನಾಥಾ ಮೃದುಮಂದಹಾಸಾ
ಪರಮಕೃಪಾಳು ರುಕ್ಮಿಣಿ ಮನೋಲ್ಲಾಸಾ ॥ ೨ ॥

## ಉದಯರಾಗ

ಏಳು ವೆಂಕಟರಮಣ ಏಳು ಶರಣರ ತ್ರಾಣ
ಏಳು ತಿರುಮಲೆವಾಸಾ ಏಳು ಶ್ರೀ ಶ್ರೀನಿವಾಸಾ ||
ಏಳಯ್ಯ ಬೆಳಗಾಯಿತೂ || ಪ ||

ದೂರ ಬಾನಲಿ ನೋಡೂ ಉಷೆಯು ಓಕುಳಿಯಾಡಿ
ತೋರ ಮುತ್ತಿನ ತಟ್ಟೆಯಲಿ ಆರತಿಯ ಪಿಡಿದೂ
ಧೀರ ಗಂಭೀರ ಸುಗಾತ್ರ ಶ್ರೀಶನೆ ನಿನಗೇ
ತೋರುತಲಿ ಜಗಕೆಲ್ಲ ಉದಯುವನು ಸಾರುತಿರೆ
ಏಳಯ್ಯ ಬೆಳಗಾಯಿತೂ || ೧ ||

ವಂದಿಮಾಗಧರು ಈ ಶುಕ ಪಿಕಾವಳಿಯೆಲ್ಲ
ಛಂದದಿಂಗಾನವನು ಪಾಡುತ್ತ ಸ್ತುತಿಸುತ್ತ
ಇಂದೀವರಾಕ್ಷನೇ ದ್ವಿಜವೇದ ಘೋಷದಲಾಗ
ವಂದಿಸುತ ತವಪದಕೆ ಏಳು ಏಳೆನ್ನಲೂ
ಏಳಯ್ಯ ಬೆಳಗಾಯಿತೂ || ೨ ||

ಮಲ್ಲೆ ಮಲ್ಲಿಗೆ ಜಾಜಿ ಸಂಪಿಗೆ ಇರುವಂತಿಗೆಯು
ಫುಲ್ಲನಯನೆಯರೆಲ್ಲ ಮಾಲೆಗಳ ಮಾಡುತಲಿ
ವಿಧವಿಧದ ಫಲಗಳ ಧೇನು ಕ್ಷೀರವ ತಂದು
ಸದಯ ಆರೋಗಣೆಗೆ ಸಮಯ ಬಂದಿದೆ ಎಂದು
ಏಳಯ್ಯ ಬೆಳಗಾಯಿತೂ || ೩ ||

ಪರಿಪರಿಯ ಗಾನದಲಿ ಪರಿಪರಿಯ ಲಾಸ್ಯದಲಿ
ಕರಿರಾಜ ವರದನೇ ವಿಧ ವಿಧದ ನಾಟ್ಯದಲಿ
ತಾಳ ತಂಬೂರಿಗೆಜ್ಜೆ ಪಿಡಿದುದಾಸರು ಪಾಡೆ
ಏಳು ಪೊರೆಯಲು ಜಗವಾ ರುಕ್ಮಿಣಿಯ ವರದಾ
ಏಳಯ್ಯ ಬೆಳಗಾಯಿತೂ || ೪ ||

---

## ಸರಸಿಜನವದಲ

ಸರಸಿಜನವದಲ ವಿಕಸಿತ ನಯನಾ
ಸರಸಿಜನಾಭಾ ಹೇ ಶ್ಯಾಮ ಮುರಾರೇ ॥ ಪ ॥

ನಟವರ ಯಮುನಾ ತೀರವಿಹಾರೀ
ಕುಟಿಲಾಲಕಮನು ಚಿತ್ತ ಸಂಚಾರೀ
ಮಕರ ಕುಂಡಲವರ ಪೀತಾಂಬರಧಾರೀ
ಶಕಟ ಸಂಹಾರೀ ಭಕ್ತಮಾನಸಹಾರೀ ॥ ೧ ॥

ಗಂಗಾಚುಂಬಿತ ವರಪಾದಯುಗಲ
ತುಂಗಗಿರಿವಾಸ ಕರುಣಾಲಾವಾಲಾ
ಶೃಂಗಾರ ಶೋಭಿತ ವರಪದ್ಮಿನೀವರ
ಗಂಗಾಧರ ಪೂಜಿತ ರುಕ್ಮಿಣಿವರದಾ ॥ ೨ ॥

## ನೆನೆಮನವೆ

ಶ್ರೀ ವೆಂಕಟೇಶನಾ ನೆನೆಮನವೆ ನಿರಂತರ ॥ ಪ ॥

ತರುಗಿಡನಿಕರ ಶೈಲದ ಮಧ್ಯೆ
ಸರಿತೆಯ ಮಾರ್ದವ ಕೇಳುತಲಿರಲು
ಏಳು ಸುತ್ತಿನ ಕೋಟೆಯ ಮಧ್ಯದಿ
ಆಳುತಲಿರುವ ಪಾಳೆಯಗಾರನ ॥ ೧ ॥

ಇವನ ರಾಜ್ಯದಿ ಕ್ಷಾಮ ಡಾಮರವಿಲ್ಲ
ಭುವಿಯೆಲ್ಲ ಸುಖದಿಂದ ಬಾಳುವುದಲ್ಲ
ದಿವಿಜರೊಡೆಯ ಶ್ರೀ ರುಕ್ಮಿಣಿವರದನೂ
ಸವಿಲಾಸದಿ ಪಾಲಿಪ ಜಗವನೆಲ್ಲವನೂ ॥ ೨ ॥

---

## ಸಾಗಿಬಾರಯ್ಯ

ನಿಖಿಲ ಗುಣಾರ್ಣವ ನಿತ್ಯ ನಿರ್ಮುಕ್ತ ದೋಷ
ಅಖಿಲ ಕೋಟಿಜಗವ ಪಾಲಿಪ ಶ್ರೀನಿವಾಸಾ
ನಿಗಮಾಗಮಾಧಾರ ಭಕ್ತಮನಮಂದಾರ
ಸುಗುಣ ಗಂಭೀರ ನೀ ಸಲಹು ಭಕ್ತರಾ ॥ ೧ ॥

ಸಾಗರಶಯನಾ ಫಣಿ ಫಣನರ್ತನಾ
ರಾಗವಿರಾಗರಹಿತಾ ರಮಾರಮಣಾ
ಯೋಗಿಪೂಜಿತ ಹರಿ ರುಕ್ಮಿಣಿವರದಾ
ಸಾಗಿಬಾರಯ್ಯ ಭಕ್ತಮನಮಂದಿರದಿ ॥ ೨ ॥

---

## ಸ್ಮರಣೆ

ಸ್ಮರಿಸುವೆ ನಿನ್ನನ್ನು ಸ್ಮರಪಿತ ಶ್ರೀಶನೆ
ಕರುಣಾ ಘನನೆ ಶರಣವರೇಣ್ಯನೆ ॥

ಅಂದು ಭೃಗುಋಷಿಯ ಛಂದದಿಂದೊದೆಯಲು
ಇಂದಿರೆ ತಾಪವಗೊಂಡು ಪೋದಳು ನಿನ್ನ ಬಿಟ್ಟು ।
ಕುಂದರದನೆ ತಾ ನಿಲ್ಲಲು ಕೊಲ್ಲಾಪುರದಿ ।
ಬಂದು ನೆಲೆಸಿದೆಯೋ ಈ ಸಪ್ತ ಶೈಲದಿ ॥ ೧ ॥

ಗಗನರಾಜಪುತ್ರಿ ಸಖಿಯರೊಡನಾಡುತ್ತ ।
ಮಿಗೆ ಹರುಷದಿಂದ ವನದಲಿ ಚರಿಸುತ್ತ ।
ತೇಜಿಯನೇರಿ ಬಂದ ಮೋಜಿನ ಪುರಷನೇ ।
ಸೋಜಿಗದಿ ಕಂಡು ನಿನ್ನ ಕಲ್ಲುಗಳಿಂದಾಡಿ ॥ ೨ ॥

ಮನೆಯ ಸೇರುತ್ತ ಜ್ವರವನು ಪೊಂದಲು
ಇನಿಯಳಿಗಾಗಿ ನೀ ಕೊರವಿಯಾದೆಯೋ ।
ಪದುಮಿನಿ ಕೈಪಿಡಿದು ಸದಯನೆಲೆಸಿಲ್ಲಿ
ಮುದದಿಂದ ಭಕ್ತರ ಕಾಯ್ವೆ ರುಕ್ಮಿಣಿವರದ ॥ ೩ ॥

---

## ಸಕಲಕೆಲ್ಲಕು ನೀನೆ

ಸಕಲಕೆಲ್ಲಕುನೀನೆ ಅಕಳಂಕ ಚರಿತಾ
ನಿಖಿಲ ವಿಶ್ವಾಧಾರ ನಿತ್ಯಪರಿಪೂರ್ಣಾ ॥ ಪ ॥

ತಂದೆತಾಯಿಯು ನೀನೆ ಬಂಧುಬಳಗವು ನೀನೆ
ಇಂದೀವರಾಕ್ಷ ಸುಭಗ ಸುಂದರಾಂಗನು ನೀನೆ
ಪ್ರಾಣಜ್ಯೋತಿಯು ನೀನೆ ತ್ರಾಣಜೀವನು ನೀನೆ
ಪ್ರಾಣ ಪ್ರಿಯ ನೀನಯ್ಯ ಸಕಲ ಜೀವಾತ್ಮರಿಗೆ ॥ ೧ ॥

ದಿವಿನಿಶಾಪತಿ ನೀನೆ ಭವರೋಗ ಹರ ನೀನೆ
ಭುವಿಯೊಳಗೆ ಬಾನೊಳಗೆ ವ್ಯಾಪಿಸಿರುವನು ನೀನೆ
ಭೂತ ಭವಿಷ್ಯದ್ವರ್ತಮಾನ ಕಾಲನು ನೀನೆ
ಭೂತನಾಥನಿಂ ಭಜಿತ ಪ್ರೀತಿವರ್ಧನ ನೀನೆ ॥ ೨ ॥

ಸತ್ಯಸಾಧನು ನೀನೆ ಸತ್ಯವಾಸನು ನೀನೆ
ಸತ್ಯ ಕೀರ್ತಿಯು ನೀನೆ ನಿತ್ಯ ಸತ್ಯನು ನೀನೆ
ಸಚ್ಚಿದಾನಂದ ಶ್ರೀ ಶೇಷಾದ್ರಿಪತಿ ನೀನೆ
ಅಚ್ಯುತಾನಂತ ಶ್ರೀ ರುಕ್ಮಿಣೀವರದ ನೀನೆ ॥ ೩ ॥

---

## ಮುರುಳೀ ಲೋಲಾ

ಅರುಣ ಪಲ್ಲವ ಧರ ಮುರುಳೀಲೋಲಾ
ನರನಾರಾಯಣನೇ ಗೋಕುಲ ಬಾಲಾ
ಸುರನರವಂದಿತ ಪಾವನಚರಣಾ
ಶರಣಜನ ವತ್ಸಲ ಪದ್ಮಿನಿ ರಮಣಾ
ವಂದಿಪೆನು ನಿನ್ನ ಶ್ರೀರಮಣಾ ॥ ೧ ॥

ಕಟಿತಟಪಟ ಪೀತಾಂಬರಧರಾ
ಕುಟಿಲಾಲಕ ವಕ್ಷ ತುಲಸೀಹಾರಾ
ಶಕಟಾಸುರಭಂಜನ ಶೈಲನಿವಾಸಾ
ಅಕಳಂಕ ಚರಿತಾ ರುಕ್ಮಿಣಿವರದಾ
ವಂದಿಪೆನು ನಿನ್ನಾ ಶ್ರೀರಮಣಾ ॥ ೨ ॥

---

## ಶ್ಲೋಕ

ಬ್ರಹ್ಮ, ಹರ, ಸುರರಿಂದ ಪೂಜಿತ ಶ್ರೀಶ
ದಿವ್ಯ ಮಂಗಳ ರೂಪಾ ಶೇಷಾದ್ರಿವಾಸಾ
ದುಷ್ಟದಮನನೇದೇವ ಸಾಧುಸುತ್ರಾಣಾ
ಕಷ್ಟನಿವಾರಣಾಶ್ರೀಶ ಪದ್ಮಿನಿರಮಣಾ ॥ ೧ ॥

ಅಸುರ ಭಯಂಕರ ಮಧುಸೂದನ ಹರಿ
ವರದಾಭಯಹಸ್ತ ಲೀಲಾಕಮಲರಾಜಿತ
ಶಂಖು ಚಕ್ರಗದಾ ಕರಕಮಲ ಶೋಭಿತನೆ
ಶಂಕೆಯಿಲ್ಲದೆ ಪೊರೆವೆ ಭಕ್ತವೃಂದವನೀನೆ ॥ ೨ ॥

ಘನನೀಲ ವಿಗ್ರಹ ಸುಭಗ ಸುಂದರನೇ
ಭೂ ನೀಳಾ ಮನೋಹರ ವೇದಾಂತವೇದ್ಯನೇ
ಪೀತಾಂಬರಧರನೇ ಕಸ್ತೂರಿ ತಿಲಕಾಂಕಿತನೆ
ಶ್ರೀ ತುಲಸಿಮಾಲಿಕಾ ರಾಜಿತ ರುಕ್ಮಿಣಿವರದನೇ ॥ ೩ ॥

---

## ಕಾಮಿತವರದಾ

ಕಾಮಿತವರದಾ ಕಾಮಪಿತ ಶ್ರೀಶಾ
ಸೋಮಧರಾರಾಧಿತ ಮೋಹನವೇಷಾ
ಯಮುನಾತಟ ರಾಜಿತ ಪಾದ ಪಂಕಜ
ಸುಮನೋಹರ ಮುಚುಕುಂದವರದಾ ॥೧॥

ಸಾಮವೇದಪ್ರಿಯ ಮೀನಾಕೃತೇ ಹರಿ
ಭೂಮಿಭಾರ ಧರಾ ಕೂರ್ಮರೂಪನೇ
ಪರಮ ಪುರುಷ ವರಹ ಭೀಮನರಸಿಂಹ
ಪರಮ ಪಾವನಾ ವಾಮನಾ ಬಲಿದಮನಾ ॥೨॥

ಕ್ಷತ್ರಿಯಕುಲದರ್ಪಹರಣ ಭಾರ್ಗವನೇ
ಅತ್ರಿ ಅನಸೂಯಾ ಪೂಜಿತ ರಾಘವ ರಾಮಾ
ಚಿದ್ರೂಪನೇ ವಿಶಿಷ್ಟ ಬುದ್ಧನೇ ನಮಿಪೇ
ಸದ್ಗುಣಶೀಲಾ ಕಲ್ಕಿಯೆ ರುಕ್ಮಿಣಿ ವರದನೇ ॥೩॥

---

## ನಿನ್ನ ಧ್ಯಾನ

ನಾನಿನ್ನ ಧ್ಯಾನದೊಳಿರಲೂ ಹರೀ
ಎನಗೇಕೆ ಈ ಜಗದ ಮಾತುಗಳೂ ||ಪ||

ಸರ್ವಸಾಕ್ಷಿಯು ನೀನೆ ಸರ್ವಜಗದಾಧಾರ
ಸರ್ವಜ್ಞಮೂರ್ತಿ ಸರ್ವತಾಪಕಹರಾ
ಸರ್ವಸೃಷ್ಟಿ ಸ್ಥಿತಿ ಸ್ಥಾಪಕಾ, ವಿನಾಶಕಾ,
ಗರ್ವವ ಬಿಡಿಸೋ ಈ ನಾನು "ನನ್ನದು" ಎಂಬಾ ||೧||

ಅಣುವೊಳಗೆ ಮಹಾತ್ಮಾ ಘನದಲ್ಲಿ ನೆಳೆಮಿಂಚು
ಇನಸೋಮ ಉಡುಗಣ ಸರ್ವಕ್ಮಾಧಾರಾ
ದಶದಿಕ್ಕು, ತ್ರಿಕಾಲ, ಅಂತರ್ಬಹಿರ್ವ್ಯಾಪಕಾ
ದಶಕಂಠನನ್ನು ಗೆಲಿದ ಶ್ರೀರಾಮ ರೂಪಾ ||೨||

ಉರಿದುರಿದು ಕರ್ಪೂರ ಧನ್ಯತೆ ಪಡೆವಂತೆ
ಸಿರಿರಮಣ ಈ ಜೀವ, ಶ್ರೀಚರಣದಲಿ ಮೆರೆಯೆ
ಹರಿ ನೀ ಕಾಯೋ ಕರುಣದಿ ರುಕ್ಮಿಣಿ ವರದಾ
ಕರುಣಿಸೋ ಎನಗಿಷ್ಟು ಕರುಣಾಮೃತವಾ ||೩||

---

## ಶ್ಲೋಕ

### ವಂದೇಹಂ ಶ್ರೀನಿವಾಸಂ

ವೇಂಕಟಗಿರಿವಾಸಂ । ಬಕುಳಾ ತನಯಂ
ಸಂಕರ್ಷಣ ಹರಿ । ಯದುಕುಲ ದೀಪಂ ||
ಸಂಕಟವಾರಣಂ । ಭವಜಲತಾರಣಂ ।
ಶಂಖ ಚಕ್ರಗದಾ ಅಭಯ ಹಸ್ತ ಶೋಭಿತಂ ||
ವಂದೇಹಂ ಶ್ರೀನಿವಾಸಂ || ೧ ||

ಮಣಿ ಮುಕುಟಧರಂ । ಶ್ರೀಷಾದ್ರಿವಾಸಂ ।
ಕನಕವಲಯ ಕಟಿ । ಪೀತಾಂಬರ ಶೋಭಿತಂ ॥
ತಿಲಕ ಕಸ್ತೂರಿ ರಾಜಿತ ಲಲಾಟ ಫಲಕಂ ।
ತುಲಸೀ ಮಾಲಾಧರಾ । ವರ ಪದ್ಮಿನೀ ವರಾಂ ॥
ವಂದೇಹಂ ಶ್ರೀನಿವಾಸಂ ॥ ೨ ॥

ಆಜಾನುಬಾಹುಂ, ಅರವಿಂದದಳನೇತ್ರಂ ।
ತೇಜೋಮೂರ್ತಿಂ, ತಪೋಧನ ಸುಪ್ರೀತಂ ॥
ಕಮಲಾ ಪದ್ಮಿನಿ ಶೋಭಿತ ಸುಂದರ ವಕ್ಷಂ ।
ಕಮನೀಯ ವಿಗ್ರಹಂ । ಶ್ರೀರುಕ್ಮಿಣೀವರದಂ ॥
ವಂದೇಹಂ ಶ್ರೀನಿವಾಸಂ ॥ ೩ ॥

——

## ಭವರೋಗಹರ

ಭವರೋಗಹರ ನಿನ್ನ ನಂಬಿ ಬಂದಿಹೆ ನಾನು
ದಿವಿಜರೊಡೆಯ ಕೃಷ್ಣ ಹರಿ ರಕ್ಷಿಸೆನ್ನಾನು ॥ ಪ ॥

ಆದಿವ್ಯಾಧಿಗಳಿಂದ ಬಲು ಬವಣೆಯನು ಜೀವ
ಮಾಧವನೆ ಪಡುತಿರಲು ನೋಡಿ ಸುಖಿತಿರಬಹುದೆ
ಸಾಧುವೇ ನಿನಗಿದೂ ಯದುವಂಶ ಕುಲದೀಪ
ಆದಿಮಧ್ಯಾಂತ ರಹಿತ ಪೊರೆಯಲಾರೆಯ ಎನ್ನ ॥ ೧ ॥

ಬಹಿರ್ವ್ಯಾಧಿಗಳ ಕಿಚ್ಚು ಅಂತರಂಗವನೀಗ
ದಹಿಸುತಿರೆ ದಳ್ಳುರಿಯು ನಿನ್ನ ನಾಮದ ಜಪವು
ಶೀತಲೋದಕದಂತೆ ಶಾಂತಗೊಳಿಸುತ್ತಿರಲು
ಭೀತಿ ತೊಲಗಿಸುದೇವ ಭವಭಂಗ ಹಿಂಗಿಸೂ ॥ ೨ ॥

ಮಣಿಮಂತ್ರ ಔಷಧಿಯು ನಿನ್ನೊರತು ಇನ್ನಿಲ್ಲ
ಅನುರಾಗವೊಂದಿರಲು ಸಾಕೆನಗೆ ನಿನ್ನದು
ಗರುಡ ರಾಜನ ಬೆನ್ನ ಏರಿಬಾ ಶ್ರೀನಿಧಿಯೆ
ವರದ ರುಕ್ಮಿಣಿಯನ್ನು ಉದ್ಧರಿಸು ಬಾ ಶ್ರೀಶಾ ॥ ೩ ॥

---

## ಶ್ರೀನಿವಾಸ

ಈತನೀಗ ಶ್ರೀನಿವಾಸನೂ
ನೋಡು ಬಾರೆಲೆ ಸಖಿಯೇ
ಶರಣಪಾಲಕನೂ ಕರುಣಾ ಪೂರ್ಣನೂ
ಮರಣ ಕಾಲದಲ್ಲಿ ಅಜಾಮಿಳಗೊಲಿದನೂ ॥ಅ॥ಪ॥

ಅಂದು ಭೃಗುಮುನಿಯು ಛಂದದಿಂದೊದೆಯಲು
ಇಂದಿರೆ ಕ್ರೋಧದಿಂದ ಒಮ್ಮೆಗೆ ನಡೆಯಲು
ವಿರಹ ವೇದನೆಯಿಂದ ಬಳಲುತ ಅಳುತಲಿ
ಉರಗನ ಹುತ್ತದಲಿ ಮನೆ ಮಾಡಿದಾತನೂ ॥ ೧ ॥

ಶಿರವ ಘಾತಿಸಿಕೊಂಡು ಚೋಳರಾಜನ ಶಪಿಸಿ
ವರ ಪದ್ಮಿನಿರಮಣಿಯು ಪಾಣಿಯ ಪಿಡಿದು
ಬರುವ ಭಕ್ತರಿಗೆಲ್ಲ ಇಷ್ಟಾರ್ಥವ ಸಲಿಸುತ
ವರದ ರುಕ್ಮಿಣಿ ಪ್ರಿಯ ನೆಲೆಸಿಹಗಿರಿಯಲ್ಲಿ ॥ ೨ ॥

---

## ಶ್ಲೋಕ

ಗಜರಾಜವರದನೇ   ನಿಜಗುಣ ಪರಿಪೂರ್ಣ
ಅಜರಾಮರವಂದಿತ   ಸೇವಿತ ಚರಣಾ
ತ್ರಿಜಗವಂದಿತ ಶ್ರೀಶ   ಶೇಷಾದ್ರಿವಾಸಾ
ಭಜಿಸುವೆನನುದಿನ   ಪಾಲಿಸೈ ಸರ್ವೇಶಾ   ॥ ೧ ॥

ದಾರಿಕಾಣೆನೊ ನಾನು   ಭವಜಲಧಿ ಅತಿ ಘೋರ
ಬಾರಿಬಾರಿಗು ನೊಂದೆ   ಮೋಹದ ಸುಳಿಯಲ್ಲಿ
ಯಾರು ಕಾಯುವರಿಲ್ಲ   ಧೀರಗಂಭೀರನೇ
ಪಾರುಗಾಣಿಸು ಬಾರೋ   ಪದ್ಮಿನೀ ರಮಣನೇ   ॥ ೨ ॥

ವೆಂಕಟ ಕೃಷ್ಣ   ಶ್ರೀ ಚರಣವನು ಪಿಡಿದಿಹೆನೊ
ಸಂಕಟದಿಂದೆನ್ನ   ಸಲಹೈಯ್ಯ ಮಾಧವನೇ
ಕಿಂಕರರಿಗೆಲ್ಲ   ಅಭಯದಾಯಕ ನೀನಯ್ಯ
ಮಂಕು ಬುದ್ಧಿಯ ಬಿಡಿಸಿ ಸಲಹೋ ರುಕ್ಮಿಣಿವರದಾ   ॥ ೩ ॥

---

## ಶ್ಲೋಕ

ರಾಜಗಂಭೀರಾ । ರಾಜೀವಲೋಚನಾ ।
ಮೂಜಗದಿಪೂಜಿತ । ರಾಕೇಂದು ವದನಾ
ಕರಿರಾಜ ವರದನೇ । ಕಂಬುಕಂಧರನೇ ।
ಶರಣರ ಪೊರೆಯುವಾ । ದುರಿತನಿವಾರಣಾ   ॥೧॥

ಮುಕುಟ ಮಣಿಧರಾ । ಶಕಟ ಸಂಹಾರಾ ।
ಅಕಳಂಕ ಚರಿತಾ । ನಿರ್ಮಲ ಗುಣಪೂರ್ಣ
ಫಾಲಶೋಭಿತ ಕಸ್ತೂರೀತಿಲಕೋಜ್ವಲ ।
ಮಾಲಾ ಶ್ರೀತುಲಸೀವಕ್ಷರಾಜಿತ ಶ್ರೀವತ್ಸ॥   ॥೨॥

ಭೂನೀಳಾ ಸಮೇತಾ ನೆಲ್ಲಸೆನ್ನ ಹೃದಯದಿ ।
ಶ್ರೀನಿವಾಸನೇ ದಿವ್ಯಮಂಗಳ ರೂಪನೇ ।
ನಾನಾ ವಿನೋದಾ ಹರಿಧೇನು ಪಾಲಕನೇ ।
ಜಾಣಾ ವೇಣುಗೋಪಾಲ । ರುಕ್ಮಿಣೀವರದನೇ ॥ ೩ ॥

---

## ನೆಲೆಸಿಹನು

ನೆಲೆಸಿಹಾ ನೋಡಿಲ್ಲಿಯೋ
ಶೈಲಾಗ್ರದಿ ಹರಿ ಶ್ರೀಶನ ರೂಪದಿ ॥ ಪ ॥
ಉನ್ನತ ಪರ್ವತದಲ್ಲಿ ಆಲಯ ಮಾಡಿ
ಸನ್ನುತ ಶ್ರೀನಿವಾಸನು ಭಕ್ತರಿಗಾಗಿಯೆ ॥ ಅ ॥ ಪ ॥

ಗಿರಿ, ಬನ, ತೊರೆಗಳು, ವಿಧ ವಿಧ ರಾಜಿಸೆ
ಸುರ, ನರ, ನಿಕರವು, ಮುದದಿಂದ ಪೂಜಿಸೆ
ಆಕಾಶಗಂಗೆಯು, ಗೋಗರ್ಭ ತೀರ್ಥಗಳು
ರಾಕೇಶ ವದನನ ಚರಣವ ತೊಳೆಯುಲು ॥ ೧ ॥

ಸ್ವಾಮಿ ಪುಷ್ಕರಿಣಿಯು ತಾಪವ ಕಳೆಯುಲು
ಸ್ವಾಮಿಯ ದರುಶನ ತ್ರಿ ತಾಪವ ಹರಿಸಲು
ಪ್ರಸನ್ನವದನದಿ ಭಕ್ತರಿಗಭಯವ ಕೊಡುತ
ಪ್ರಸನ್ನ ವೇಂಕಟ ನಿಂದಿಹ ರುಕ್ಮಿಣಿವರದನು ॥ ೨ ॥

---

## ಪರಮಪಾವನ

ಪರಮ ಪಾವನ ಹರಿ ಶ್ರೀ ವೇಂಕಟೇಶಾ
ಕರುಣದಿ ಭಕ್ತರ ಪಾಲಿಪೆ ನೀ ಶ್ರೀಶಾ ॥ ಪ ॥

ದುರಳ ದುಶ್ಯಾಸನ ವಸ್ತ್ರವನಪಹರಿಸೆ,
ತರಳೆ ದ್ರೌಪದಿಯು ಶ್ರೀ ಕೃಷ್ಣಾ ಎಂದೊರಲೆ
ತ್ವರಿತದಿ ಬಂದು ಅಕ್ಷಯವಸನವಿತ್ತಿಯೋ
ಶರಣರ ನೀ ಕಾಯ್ವ ಪರಿ ಯಾರು ಬಲ್ಲರೋ ॥ ೧ ॥

ಮರಣದ ಸಮಯದಿ ಅಜಮಿಳ ಕರೆಯಲು
ನರನಿಗೊಲಿದ ನಾರಾಯಣಾ ಸಲಹೋ ಎನಲು
ನಿಜರೂಪವ ತೋರಿ ನೀ ದಿವ್ಯ ಪದವನಿತ್ತೆ
ಗಜರಾಜಗೊಲಿದೆ ನಕ್ರನಶಿರ ತರಿದೇ ॥ ೨ ॥

ನಿಗಮಾಗಮಗಳೆಲ್ಲಾ ಅನುದಿನ ಸ್ತುತಿಸಲು
ಖಗವಾಹನ ಅಜರಾಮರರೆಲ್ಲ ಪೂಜಿಸೆ
ಮಿಗಿಲಾಗಿ ಕಾಯೋ ನೀ ರುಕ್ಮಿಣಿ ವರದಾ
ಜಗವನಾಳುವನೇ ವರ ಶೇಷಾದ್ರಿ ವಾಸಾ ॥ ೩ ॥

---

## ಪೊರೆಯೋ

ಪೊರೆಯೋ ಶ್ರೀ ವೆಂಕಟೇಶಾ ಪೊರೆಯೋ ॥ಪ॥

ಪೊರೆಯೋ ನೀ ಗಿರಿಧರ ನಂದನ ಕಂದಾ
ಪೊರೆಯೋ ನೀ ಪಾವನ ಚಿನ್ಮಯಾನಂದಾ

ಪೊರೆಯೆಂದು ಬೇಡೆ   ನಿನ್ನ ಭಕ್ತರು ಗೋವಿಂದಾ
ತ್ವರೆಯಾಗಿ ಬಾರೆನ್ನ ಮನದಾನಂದಾ   ೧॥

ಜನನ ಮರಣ ಚಕ್ರ ತೀಕ್ಷ್ಣ ಧಾರೆಯಲಿ
ಜನರೆಲ್ಲ ತತ್ತರಿಸಿ ದಾರಿಕಾಣದೆ ಅಲ್ಲಿ
ಇನಕುಲದೀಪನೇ   ಭಜಿಸೆ ನಿನ್ನನು ದಿನಾ
ಜನಕ ಸುತಾವರ ಮರೆಯಾಗಿ ನಿಲ್ವರೇ

ಕರುಣಾಳು ಕರಿರಾಜ ವರದ ನೀನಲ್ಲವೆ
ಕರೆದಾಗ ಭಕ್ತರು ಬರುವ ದೊರೆಯಲ್ಲವೆ
ಶರಣಾದೆ ಹರಿ ನಿನಗೆ ಶ್ರೀ ರುಕ್ಮಿಣಿ ವರದಾ
ಮರಣ ಸಮಯದಲ್ಲಿ ಕೊಡು ನಿನ್ನಯ ಪಾದಾ   ॥೩॥

— —

## ದಯಮಾಡೋ

ದಯಮಾಡೋ ಹರಿ   ಎನ್ನಂತರಂಗದಲ್ಲಿ
ಭಯವ ತೊಲಗಿಸೋ   ಭವದ ಬೇಡುವೆ ಶ್ರೀಶಾ॥

ಶ್ಯಾಮಲ ಕಾಯಾ   ಶ್ರೀ ಮಲೆಯರಾಯಾ
ಸೋಮ ಕುಲೋದ್ಭವಾ   ಪದ್ಮಿನಿ ವರನೇ॥

ಸುಗುಣಗಂಭೀರಾ   ನಾನಾವತಾರಾ
ಖಗವಾಹನ ಪ್ರಭೋ   ಮೋಹನಾಕಾರಾ॥

ಮೆಲುಮೆಲನೆ ಬಾರೋ   ಹೃದಯವನೆ ಸೇರೋ
ಚೆಲುವ ಶ್ರೀ ಶ್ರೀನಿವಾಸಾ   ರುಕ್ಮಿಣಿವರದನೇ॥

— —

## ಅನ್ಯರಾರಿಹರು

ನಿನ್ಹೊರತು ಅನ್ಯರಾರಿಹರೈಯ ಎನಗೇ
ಪನ್ನಂಗಶಯನನೇ ಕರುಣೆ ಬಾರದೆ ನಿನಗೇ ||ಪ||

ಸಕಲ ತತ್ವಾರ್ಥ ವೇದವೇದಾಂತಸಾರಾ
ಅಕಳಂಕ ಚರಿತನೇ ಆದಿ ಮಧ್ಯಾಂತರಹಿತಾ ||ಅ||ಪ||

ದೇವಕೀನಂದನ ನಂದಗೋಪ ಪ್ರಿಯಾತ್ಮಜನೇ
ಭಾವಿಸುವರ ಮನದಿ ರಮಿಸುವ ನಾರಾಯಣನೇ
ಪೂತನಾಜೀವಿತ ಹರಾ ಶಕಟಾಸುರ ಭಂಜನಾ
ಭೀತಿ ತೊಲಗಿಸೋ ಮನದ ಬೇಡುವೆನು ನಿನ್ನಾ ||೧||

ನೀಲಮೇಘ ಶರೀರ ದಿವ್ಯ ಸುಂದರ ಮೂರ್ತೇ
ಲೀಲಾಮಾನುಷ ವಿಗ್ರಹ ಅನುಪಮ ನಿರ್ಮಲ ಕೀರ್ತೇ
ಶಂಖು ಚಕ್ರಧರಾ ಲೀಲಾ ಕಮಲ ರಾಜಿತ ಹಸ್ತಾ
ಶಂಕರ ಪ್ರಿಯಶ್ರೀಶಾ ಕಿಂಕರರ ಕೈಂಕರ್ಯ ನಿರತಾ ||೨||

ವನಮಾಲೀ, ಪೀತವಸನಧಾರೀ, ಪಾರಿಜಾತಾಪಹಾರೀ
ಇನಕುಲಾಂಬುಧಿ ಸೋಮಾ ಭಕ್ತ ರಕ್ಷಕನೇ
ಯಮಳಾರ್ಜುನ ಭಂಜನಾ ಕಾಳೀಯ ಫಣೆ ನರ್ತನಾ
ಅಸುರ ವಂದಿತ ಶೈಲವಾಸಾ ರುಕ್ಮಿಣಿ ವರದಾ ||೩||

---

## ಶರಣು

ಸಿರಿರಮಣ ತಿರುಮಲೆಯವಾಸ ನಿನ್ನಡಿಗಳಿಗೆ
ಶರಣಾಗಿ ಬಂದಿಹೆನು ಆರ್ತಳನು ಉದ್ಧರಿಸೋ ||ಪ||

ಕರುಣಾಸಾಗರನೆಂಬ ಬಿರುದುಪೊತ್ತವ ನೀನು
ನರಗೊಲಿದ ನಾರಾಯಣಾ ನಿನ್ನ ನಂಬಿಪೆ ನಾನು ||ಅ||ಪ||

ವೆಂಕಟೇಶನೆ ನೀಲ ನೀರದ ನಭ ಕಾಯಾ
ಸಂಕಟಹಾರಕಾ ಪುರುಷೋತ್ತುಮರಾಯಾ
ತುಲಸೀ ಮಾಲಿಕಾ ಉನ್ನತ ವಕ್ಷದಿ ಶೋಭಿತಾ
ಕಲಿಮಲ ಭಂಜನ ನಿಷ್ಕಳಂಕ ನಿರಂಜನನೇ ||೧||

ಯೋಗಿ ಹೃತ್ಪದ್ಮಮಂದಿರ ವಾಸ ಶೋಭಿತ
ಭೋಗಿಶಯನ ಹರಿ ಚಿಂತಿತಾರ್ಥಪ್ರದಾತಾ
ಆರ್ತಜನರಿಗೆ ಅಭಯ ಪ್ರದಾಯಕಾ ಶ್ರೀಶಾ
ಕರ್ತ ನೀ ಜಗಕೆಲ್ಲಾ ಅನಘ ರುಕ್ಮಿಣೀವರದಾ||

---

## ಭವದ ಮಾಯೆ

ಬದ್ಧನಾದೆ ಬದ್ಧನಾದೆ ಭವದ ಮಾಯೆಯೊಳಗೇ
ಬುದ್ಧಿ ಹೀನನಾದೇ ಈ ಸಾಗರದ ಸುಳಿಯೊಳಗೇ ||ಪ||

ಸತ್ವರಜಸ್ತಮದ ಅಹಂಕಾರದಿಂಕೂಡೀ
ಸತ್ಯವಾ ತಿಳಿಯದೇ ನಿತ್ಯ ನಿನ್ನನು ಮರೆತೇ
ವಿತ್ತಗಳಿಸುವಾಸೆಯಿಂ ಹೊತ್ತನೂ ನಾ ಕಳೆದೇ
ಮಿತ್ರನೇ ನೀ ಸಕಲಕೆಲ್ಲವೆಂಬುದನು ಮರೆತೇ ||೧||

ಈತಿ ಭೀತಿಗಳಿಂದ ಮನದಾಕಾಶವನು ಮುಚ್ಚಿ
ಪ್ರೀತಿಸದೆ ಹೋದೇ ನಿನ್ನ ಶರಣರೆಲ್ಲರನೂ
ಕಾಕು ಮನುಜರ ಕೂಡಿ ನಿಂದಾನುಡಿಯನಾಡೀ
ಬೇಕು ಬೇಕೆನಗಿಷ್ಟು ಭವದಾಸೆಯೊಂದೇ ||೨||

ಜೀವ-ದೇವರ ಭೇದ ಲಕುಮಿಪತಿ ನಾ ಮರೆತೇ
ಜೀವಾಂತರ್ಯಾಮಿ ನಿನ್ನ ಗುರುತಿಸದೇ ಹೋದೇ
ಭಾವನೆ, ಕಲ್ಪನೆಯು ಧ್ಯಾನ ಧಾರಣದಲ್ಲಿ
ದೇವ ಶ್ರೀಶನೆ ನಿನ್ನ ಸ್ಮರಣೆ ಕೊಡೊ ರುಕ್ಮಿಣೀವರದಾ ॥೩॥

——

## ಶರಣರ ಸಂಗ

ಶರಣರ ಸಂಗ ಕೊಡೋ ಶರಣಾದೇ ನಿನಗೇ
ಕರುಣಾಸಾಗರನೆಂಬ ಬಿರುದಿಗೆ ಮರುಳಾದೇ

ಶೇಷಾದ್ರಿನಿಲಯಾ ವಾಸುಕಿ ಶಯನಾ
ಶ್ರೀಶ ಜಗದೀಶಾ ಪುರುಷೋತ್ತಮನೇ

ಭಕ್ತಮನ ಮಂದಾರ ಗೋಪೀ ಚಿತ್ತಚೋರಾ
ನಿತ್ಯತೃಪ್ತ ನಿರಂಜನ ದೇವಕಿ ನಂದನಾ

ದಶರೂಪಧರನೇ ದಶಕಂಠಸಂಹಾರಾ
ವಶವಾಗುವೆ ನೀನು ನಿನ್ನ ನಂಬಿದವರಿಗೆಲ್ಲ

ಜಯ ಮಕುಟ ಶೋಭಿತ ಶ್ರೀ ಪದ್ಮಿನಿವರಾ
ಕಟಿ ಹಸ್ತಧರನೇ ಶ್ರೀ ರುಕ್ಮಿಣಿ ವರದಾ

——

## ನಿನ್ನ ಮಹಿಮೆ

ಯಾರರಿವರೋ ನಿನ್ನ ಮಹಿಮೆಯನು ಹರಿಯೇ
ವರದಾಭಯ ಹಸ್ತ ವನಮಾಲ ವಿರಾಜಿತನೇ ||ಪ||

ಕಂಜಾಪನೇತ್ರ ನೇ ಘನಗಾತ್ರ ಮಹಾಪವಿತ್ರ
ಸಂಜಯ ಪ್ರಿಯನೇ ವೆಂಕಟಾದ್ರಿವಾಸನೇ ||ಅ||ಪ||

ಕಮಲಾಯತ ಲೋಚನ ಲೋಕಪತೇ
ಯಮಳಾರ್ಜುನ ಭಂಜನ ಮೋಹನ ಮೂರ್ತೇ
ಜಗದೇಕ ಧನುರ್ಧರ ಧೀರಮತೇ ಶ್ರೀಶ
ಜಗಪಾಲಕ ದೇವ ಅಕಳಂಕಚರಿತನೇ ||೧||

ಭೃಗುಮುನಿಯ ಪಾದ ತಾಡನೆಯ ಸಹಿಸಿ
ಖಗರಾಜ ವರದ ನೀ ಬಂದು ಗಿರಿಯಲ್ಲಿನೆಲೆಸೀ
ಮೃಗಯಾ ವಿಹಾರಕೆ ತೆರಳಿ ಪದ್ಮಿನಿಯ
ಸೊಗಸಾಗಿ ಕೈಪಿಡಿದೆ ಶ್ರೀ ನಿಧಿಯೇ ||೨||

ಸ್ವಾಮಿ ಪುಷ್ಕರಿಣೀ ತಟವಾಸಾ ಶ್ರೀನಿವಾಸಾ
ಸಾಮಗಾನ ಪ್ರಿಯ ಭಕ್ತ ಮಾನಸವಾಸಾ
ಕೋರಿದ ವರಗಳ ನೀಡುವ ಭಕ್ತರಾಧಾರಾ
ಬಾರಿಬಾರಿಗು ಪೊರೆಯೋ ರುಕ್ಮಿಣಿಯ ವರದಾ ||೩||

---

## ವಿಶ್ವಪತಿ

ವಿಶ್ವಪತಿ ಹೊನಲಾಗಿ ನಿನ್ನಪಾರದ ಮಹಿಮೆ
ವಿಶ್ವದಲ್ಲಿ ಎಲ್ಲೆಡೆಯು ಹರಡಿರುವುದು ನೋಡಯ್ಯ ||ಪ||
ಗಿಡ, ಬಳ್ಳಿ, ಮರ, ಬನವು, ಮೃಗ, ಖಗವು, ಮಾನವನು
ಉಡುಗಣವು, ಇನ, ಸೋಮ, ಗಗನ, ಸರಿತ್‌ಸಾಗರವು ||ಅ||ಪ||

ದಿನ, ರಾತ್ರಿ, ದ್ವಿಪಕ್ಷಿ, ಮಾಸ ಹನ್ನೆರಡರಂತೆ
ಗಣನೆಗೆಟುಕದ ಋತುವು ಸಂವತ್ಸರಗಳು
ಯುಗವು, ಕಲ್ಪವು ಮತ್ತೆ ಬ್ರಹ್ಮಾಂಡಗಳೆನಿತೊ
ಜಗದ ಸೃಷ್ಟಿ, ಸ್ಥಿತಿ, ಲಯಕಾಧಾರವಾಗಿ ||೧||

ಬಂಧಿತವು ನಿನ್ನ ಸೂತ್ರದಿಂದೀ ಬ್ರಹ್ಮಾಂಡ
ಇಂದು ನನ್ನವರು, ಅವರವರೆಂಬ ಭೇಧವಳಿಯೆ
ಒಂದೆ ಮನಸಿನಿಂ ಭಜಿಸೆ ಶ್ರೀಶ ನಿನ್ನೀಜೀವ
ಮ... ಬಂದೆತ್ತಿಕೊಳ್ಳಲವೊ ರುಕ್ಮಿಣಿ ವರದಾ ||೨||

---

## ಸ್ಮರಣೆಯ ಕೊಡು

ಸ್ಮರಣೆಯಕೊಡು ಸದಾ ಶ್ರೀ ಹರಿಯೇ
ಚರಣ ಸಾನಿಧ್ಯವು ಕೊಡು ಶ್ರೀ ಪತಿಯೇ

ಆದಿಮೂಲನೆಂಬ ನಾಮದಿ ಗಜರಾಜ
ಮಾಧವಾ ನಿನ್ನನು ಕರೆಯಲು ಒದಗಿದೇ
ಯಾದವರಾಯನೆ ಪಾಂಚಾಲಿಯ ವಸ್ತ್ರ
ಸಾದರದಿಂದಲಿ ಅಕ್ಷಯಃಗೊಳಿಸಿದೇ ||೧||

ಅಜಮಿಳಗೊಲಿದೇ, ವ್ಯಾಸವಾಲ್ಮಿಕಿ
ನಿಜ ರೂಪವ ಕೋರಲು ಕರುಣಿಸಿದೇ
ಬೃಂದಾವನದ ಗೋಪಿಯರಿಗೆ
ಸುಂದರ ರೂಪದಿ ನಿಂದೆ ಹೃದಯದಲಿ ||೨||

ತಾರಕನಾಮನೆ–ಶ್ಯಾಮಲರೂಪನೆ
ಕಾರುಣ್ಯಮೂರ್ತಿಯೇ ತಿರುಮಲೆವಾಸಾ
ಶರಣಾಗತ ವತ್ಸಲ ಬಿರುದಾಂಕಿತನೇ
ನಿರುತವು ನಿನ್ನ ಸ್ಮರಿಪೆನೊ ರುಕ್ಮಿಣಿವರದಾ ॥೩॥

——

## ಜಯ ವೆಂಕಟೇಶಾ

ಶಿಷ್ಟಜನ ರಕ್ಷಣ ದುಷ್ಟಮತಖಂಡನಾ
ಮಧುರ ವೇಣುಗಾನ ತಾನ ವಿಚಕ್ಷಣಾ
ಚಿನ್ಮಯ ನೀ ಸಗುಣ ಸುಗುಣಗಣಾ
ಮನ್ಮಥಪಿತ ಶ್ರೀಶಾ ಕಲಿಮಲ ಭಂಜನಾ
ಜಯ ಜಯಾ ಜಯ ವೆಂಕಟೇಶಾ ॥ ೧ ॥

ಸಾಗರದ ಮಧ್ಯದಲಿ ವಟಪತ್ರದ ಮೇಲೆ
ಯೋಗದಿಂ ನಿದ್ರಿಸಿದೆ ಬ್ರಹ್ಮಾಂಡವನು ಪುಟ್ಟಿಸಿದೆ
ರಾಗ–ವಿರಾಗ ರಹಿತ ಭಗವಂತ ಕೃಷ್ಣಾ
ಯೋಗಿಗಳ ಹೃತ್ಕಮಲವಾಸಾ ಶ್ರೀನಿವಾಸಾ
ಜಯ ಜಯಾ ಜಯ ವೆಂಕಟೇಶಾ ॥ ೨ ॥

ವಾಸುಕಿಶಯನ ನೀ ಶೇಷಾದ್ರಿಯಲಿ ನೆಲೆಸಿ
ಲೇಸಾಗಿ ಪಾಲಿಸುತ ನಿನ್ನ ಭಕ್ತಗಣವಾ
ಭೂನೀಳಾ ಸಮೇತಾ ಶಂಖ ಚಕ್ರಗದಾಧರಾ
ಧ್ಯಾನಿಸುವರ ಮನದಲ್ಲಿರುವೆ ರುಕ್ಮಿಣಿವರದಾ ॥ ೩ ॥

——

## ನಿನ್ನ ವಿಭೂತಿ ದರುಶನಾ

ಹರಿ, ಕರುಣಿಸೋ ನಿನ್ನ ವಿಭೂತಿಯ ದರುಶನಾ
ಶೌರೇ, ಇಂದಿರಾರಮಣನೇ ಶ್ರೀ ಗೋವಿಂದ ನೀನೇ

ಅಜನಲ್ಲಿ, ಗಜನಲ್ಲಿ ಶ್ವಾನನಲ್ಲಿ, ಸಿಂಹದಲಿ,
ದ್ವಿಜನಲ್ಲಿ ಶೂದ್ರನಲಿ, ದಿನದಲ್ಲಿ, ರಾತ್ರಿಯಲಿ
ಕಾಣಲಾಶಿಪೆನೋ ನಿನ್ನ ಬೆಳಕಿನ ಮಂಡಲವ
ಮಾಣೆನೋ ಇನ್ನೊಂದನು ಈ ಭೂಮಂಡಲದಲಿ ॥ ೧ ॥

ಜನನ ಮರಣ ಸಂಸಾರ ಚಕ್ರದಲಿ
ಜನಗಳು ತೊಳಲುತ ಘಾಸಿಯ ಪಡುತ
ಸರಸದಿ ನಗು ದುಃಖದಿ ಬೇಯುತ
ಇರುವ ಪರಿಯು ನಿನ್ನ ಲೀಲಾವಿಲಾಸವೊ ॥ ೨ ॥

ನಮೋ ನಮೋ ಈ ನಿನ್ನ ಲೀಲೆಗಳಿಗೆ
ರಮಾರಮಣ ಇನ್ನು ಭರಿಸಲಾಗದೊದೇವ
ಎಲ್ಲೆಲ್ಲಿ ನೋಡಲು ನಿನ್ನನೆ ಕಾಣುವಂಥ
ಚೆಲ್ವರೂಪವ ತೋರೋ ರುಕ್ಮಿಣಿ ವರದಾ ॥ ೩ ॥

---

## ಮನದಿ ನಲಿ

ಮನದಿ ನಲಿ ಬಾರೋ ಶ್ರೀನಿವಾಸ
ಘನನೀಲವರ್ಣ ತಿರುಮಲ ವಾಸಾ

ತಮಾಲಶ್ಯಾಮಲ ಸುದೀರ್ಘಕಾಯಾ
ರಮಾಮನೋಹರ ವೆಂಕಟರಾಯಾ
ಹಿಮರಾಜ ತನಯಾ ರಮಣೀ ಪ್ರಿಯಾ
ಅಮರಾದಿ ವಂದಿತ ವೈಕುಂಠ ರಾಯಾ ॥ ೧ ॥

ಚಂದನ ಕಸ್ತೂರಿ ತಿಲಕ ಲಲಾಟ ಪ್ರದೇಶಾ
ಇಂದೀವರಾಕ್ಷ ಮಧುರ ಮೋಹನ ವೇಷಾ
ಕುಂದರದನಾ ಭೂನೀಳಾ ವಕ್ಷೋಧರನೇ
ನಂದ ನಂದನ ಮುಕುಂದ ಮುಚುಕುಂದ ವರದನೇ ॥ ೨ ॥

ತಿರುಪತಿ ತಿರುಮಲೆ ಮೋಹನ್ನ ದೇಶದಿ
ಸರಸದಿ ನೆಲೆಸುತ ಭಕ್ತರಿಷ್ಟಾರ್ಥವ
ನೆರವೇರಿಸುವಾ ಶ್ರೀ ರುಕ್ಮಿಣಿ ವರದಾ
ತ್ವರಿತದಿ ನೆಲೆಸೆಲೊ ಹೃದಯ ಪೀಠದಲಿ ॥ ೩ ॥

ಉಗಾಭೋಗ

ಮಾತುಗಳ ಎಣಿಕೆಗೆ ಗೀತಗಳ ನಾದಕ್ಕೆ
ಶಾಸ್ತ್ರ ಸಮ್ಮತಿ ಪುರಾಣೇತಿ ಹಾಸಗಳಿಗೆ
ನೀತಿ, ನ್ಯಾಯಾನ್ಯಾಯಾ ತತ್ವಾರ್ಥಗಳಿಗೆ
ಸೇತುಪತಿ ನಾರಾಯಣನು ದೊರಕಲಾರ ॥ ೧ ॥

ಆಯಾಯ ಕಾಲಕ್ಕೆ ಆಯಾಯ ವೇಷದಲಿ
ಆರ್ಯ ಜನಗಳು ಬಂದು ತತ್ವ ಶಾಸ್ತ್ರವನರುಹೆ
ಮನುಜರೆಲ್ಲರು ಅರಿತು ಹರಿಸರ್ವೇಶನೆಂಬುದನು
ಮನುಮಥನ ಪಿತನನ್ನು ಭಕ್ತಿಯಿಂಭಜಿಸಿರೆನಲು

ಸತ್ಯವನು ತಿಳಿಯದೆ ಬಳಲಿ ಬೆಂಡಾಗಿ
ತತ್ವವನು ಅರಿಯದೆ ಕಡುಮೂರ್ಖರಾಗಿ
ಎಲ್ಲಕಾಲದಲಿ ಎಲ್ಲರಲ್ಲಿರುವ ನಿನ್ನ ತಿಳಿಯದೆ
ತೊಳಲುತಿರುವವನು ದ್ಧರಿಸೋ ರುಕ್ಮಿಣೀವರದಾ ॥ ೩ ॥

---

## ಕರುಣಿಸೋ

ಕರುಣಿಸೋ ಶ್ರೀನಿವಾಸ ಕರುಣಿಸೋ ॥ ಪ ॥

ಕರುಣಿಸೋ ಎನಗಿಷ್ಟು ಕರುಣಾಮೃತವಾ
ಶರಣ ರಕ್ಷಕ ಶ್ರೀಶ ಪಾವನ ಚರಿತಾ
ದುರಿತ ನಿವಾರಕ ಮೋಕ್ಷದಾಯಕನೇ
ಭರಿಸಲಾರೆನು ನಾನು ಜಗದಜಂಜಡವನ್ನು ॥ ೧ ॥

ತಂದೆತಾಯಿಯು ನೀನೆ ಬಂಧುಬಳಗವೆಲ್ಲ
ಇಂದಿರಾಧವ ನಿನ್ನ ಹೊರತು ಎನಗಿಲ್ಲ
ಒಂದೆಮನದಿಂದ ಭಜಿಸಲು ನಿನ್ನನು
ಸಂದೇಹವೇತಕೆ ಹಸುಳೆಯ ಪೊರೆಯುಲು ॥ ೨ ॥

ಎಂಭತ್ನಾಲ್ಕು ಲಕ್ಷ ಯೋನಿಗಳಲ್ಲಿ
ಒಂಭತ್ತು ದ್ವಾರಗಳ ದೇಹಗೇಹದಲ್ಲಿ
ಬಂಧಿತನಾಗಿಹ ಜೀವಗೆ ಮುಕ್ತಿಯು
ಎಂದಿಗೆ ಕರುಣಿಪೆಯೊ ರುಕ್ಮಿಣಿವರದಾ ॥ ೩ ॥

---

## ನಿನ್ನ ಧ್ಯಾನ

ಧ್ಯಾನವೇ ನಿನ್ನದೂ ಮನನವೇ ನಿನ್ನದೂ ||ಪ||
ಧ್ಯಾನಿಸುವರ ಹೃದಯ ಕಮಲ ವಾಸಿತನೇ ||ಅ||ಪ||

ಸುಗುಣ ಸಾಕಾರದಿ ದಿವ್ಯಮಂಗಳ ಮೂರ್ತಿ
ಖಗವಾಹನಹರಿ ನಿನ್ನ ಚೆಲುವು ಪ್ರಜ್ವಲಿಸಲು
ಬಗೆ ಬಗೆಸುತ್ತಿಯಿಂದ ನಿಗಮಾಗಮಗಳು
ಪೊಗಳುತಿರುವಾ ನಿನ್ನ ಚೆಲ್ವಿಕೆಗೆ ಮನಸೋತೆ ||೧||

ಅಂಬರದಂತೆ ನಿರಾಕಾರನು ನೀನೆಂದು
ಬಿಂಬವು ನಿನ್ನ ಜಗದ ದೃಶ್ಯಗಳೆಂದು
ಸಂಭ್ರಮದಿಂದ ಯೋಗಿಗಳು ಪೊಗಳಲು
ಕಂಬು ಕಂದರನೆ ನಿನ್ನ ಹೃದಯದಿ ಧರಿಸಿ ||೨||

ಜಗದ ಮಾತುಗಳೆಲ್ಲ ಬೇಡವು ಎನಗೀಶ
ನಗಧರ ನಂಬಿ ಬಂದೆ ನಿನ್ನಾಶ್ರಯವನರಸಿ
ಚರಣಕಮಲವನ್ನು ಕರುಣಿಸಿ ಜೀವನ
ಕರೆದು ಕೊಳ್ಳೊ ನಿನ್ನ ಬಳಿ ರುಕ್ಮಿಣಿವರದಾ ||೩||

---

## ಭಕ್ತ ಬಂಧು

ಬಂದೆಯೋ ಭಕ್ತ ಬಂಧು ನಿಂದೆಯೋ ಶ್ರೀಗಿರಲಿ
ಇಂದಿರಾರಮಣ ಶ್ರೀಶ ನಿನ್ನ ಭಕ್ತರ ಪೊರೆಯಲು
ಮಧುರ ಮಂಗಳ ಮೂರ್ತೇ ತ್ರೈಲೋಕಕೀರ್ತೇ
ಯದು ಕುಲನಂದನ ಶ್ರೀರಮಣಿ ಪದ್ಮಿನಿ ಸಹಿತೆ ||೧||

ಏಳುಲೋಕದ ಸ್ವಾಮಿ  ಏಳುಗಿರಿಗಳ ಮೇಲೆ
ಆಳುತ ನಿಂದಿಹೆಯೋ  ಆರ್ತಪ್ರಾತನಾಗಿದೆಯೋ
ಕರೆಯುವ ಭಕ್ತರ  ಮೊರೆಯು ಕೇಳುತ ನೀನು
ತ್ವರಿತದಿ ಗರುಡನ ಮೇಲೇರಿ ಬಂದು ಪೊರೆಯೋ ॥ ೨ ॥

ಪತ್ರ ಪುಷ್ಪಫಲ ತೋಯ ಪಾಲ್ ಪಾಯಸ
ಮಿತ್ರ ನಿನಗಿದೆ ದೋಸೆ ಅಪ್ಪ ಅತಿರಸಗಳು
ಸ್ವೀಕರಿಸಿ ನೈವೇದ್ಯ ನಿನ್ನ ಬಳಗದವರೊಡನೆ
ಶೋಕವ ಹರಿಸೋ ನೀ ಜನರ ರುಕ್ಮಿಣಿವರದಾ ॥ ೩ ॥

---

## ಕರುಣಾಕರ

ಕರುಣಾಕರನೆಂಬ ಬಿರುದು ಪೊತ್ತವನೇ
ಶರಣರ ಪೊರೆಯುವ ಪುರುಷೋತ್ತುಮನೇ ॥ ಪ ॥

ಸುರನರವಿನುತನೇ  ಸಲಹೋ ಜಗವನೆ
ಪರಮಪವಿತ್ರನೆ  ಕಂಜದಳಾಯತಾಕ್ಷ ॥ಅ॥ಪ॥

ಕರಿರಾಜವರದನೇ  ತರಳ ಪ್ರಹ್ಲಾದನಾ
ಮೊರೆಯು ಕೇಳಿ ನೀ  ಕಂಭದಿ ಬಂದವನೇ
ಹಿರಿಯ ಸಭೆಯಲ್ಲಿ  ಪಾಂಚಾಲಿ ವಸ್ತ್ರನಾ
ಕರುಣಿಸಿದವನೇ  ಶೇಷಾದ್ರಿವಾಸನೇ ೧

ಕಾಯವಾಚಾ ಮನಸ ಬುದ್ಧಿ ವಾಕ್ಕುಗಳೆಲ್ಲ
ರಾಯನೇ ನಿನ್ನಾಧೀನವೆಂದು ನಂಬಿ ಬಂದಿಹೇ
ಕಾಮಿತ ನೀವನೇ  ರುಕ್ಮಿಣಿ ವರದನೇ
ಭಾಮಿನಿ ಪದ್ಮಿನೀವರ  ಉರಗಾದ್ರಿವಾಸನೇ ॥ ೨ ॥

---

## ಮಂದರ ಗಿರಿಧರ

ಮಂದರ ಗಿರಿಧರ ಸುಂದರ ಮೂರ್ತೇ
ಕಂದರ್ಪ ಜನಕಾ ಅನಂತ ಕೀರ್ತೇ ||ಪ||

ಯಶೋದಾನಂದನಾ ವೇಣುವಾದನ ನಿಪುಣಾ
ಪಾಂಡವ ಯಶಕಾರಣ ಮೋಹನಾ ಚಿದ್ಘನಾ |ಅ|ಪ|

ವರ ಪೀತಾಂಬರ ಧಾರೀ ಅಭಯ ಕರಾ
ಶಂಖ ಚಕ್ರ ಗದಾ ಕರದಲ್ಲಿ ಪಿಡಿದಿಹ
ಕಿಂಕರ ಪಕ್ಷನೇ ಕರ್ತವ್ಯ ದಕ್ಷನೇ
ಶಂಕರ ಪ್ರಿಯನೀ ರುಕ್ಮಿಣಿ ವರದಾ |೧|

---

## ಪರಿಪಾಲಿಸೋ

ಪರಿಪಾಲಿಸೋ ಸರ್ವೇಶ್ವರಾ
ಕಾರುಣ್ಯ ಗುಣನಿಧಿ ಶ್ರೀ ಶ್ರೀನಿವಾಸಾ

ಸುರರೆಲ್ಲ ಮೊರೆಯಿಡೆ ಅವತಾರ ತಾಳಿದೆ
ಕರುಣಿಸಿ ಬಂದೆಯೋ ನೀನಿಲ್ಲಿ ಶ್ರೀನಿಧೆ
ದರಹಸಿತ ವದನಾರವಿಂದ ಚಂದಿರನೇ
ಮುರುಳಿ ಮನೋಹರಾ ಗೋಪೀಮೋಹನನೇ |೧|

ದುಷ್ಟಜನ ಸಂಹರಣ ಶಿಷ್ಟ ಜನತ್ರಾಣಾ
ಕಷ್ಟ ನಿವಾರಣಾ ಶ್ರೀ ರುಕ್ಮಿಣಿಯ ಭರಣಾ
ಶೇಷಾದ್ರಿ ವಾಸನೇ ಶೇಷ ಪರ್ಯಂಕನೇ
ವಾಸಿಸೋ ಹೃದಯದಿ ಪೂರ್ಣ ಸ್ವರೂಪನೇ |೨|

---

## ನಿನ್ನ ರೂಪ

ನಿನ್ನ ರೂಪದ ಧ್ಯಾನ ನಿನ್ನ ನಾಮದ ಸ್ಮರಣಾ
ನಿನ್ನ ಮಹಿಮಾ ಶ್ರೀಶ ಇನ್ನಿಲ್ಲ ಅದರೊಬ್ಬರತಾ

ಮಂದಾರ ಮಲ್ಲಿಗೆಯ ಸುಂದರ ಚೆಲುವಿನಲಿ
ಸಿಂಧುನಯನನೆ ನಿನ್ನ ಕುಂದರದನದ ಶೋಭೆ
ಇಂದೀವರದಿ ಹರಿಯ ನಯನ ಮುಖ ಬಿಂಬವು
ಚೆಂದದಿ ಹೊಳೆಯುತಿರೆ ನೊಸಲು ಭಾನುವಿನಂತೆ ||೧||

ಅಜಮಿಳನಕಾಯ್ದ ಶ್ರಿ ಮನ್ನಾರಾಯಣನ ನಾಮಾ
ಗಜರಾಜಗೊಲಿದ ಆದಿಮೂಲಾನೆಂಬ ನಾಮಾ
ತರಳೆ ದ್ರೌಪದಿಗೆ ಅಕ್ಷಯವಿತ್ತ ಶ್ರೀ ಕೃಷ್ಣಾ
ತರಳ ಪ್ರಹ್ಲಾದನನು ರಕ್ಷಿಸಿದ ನರಸಿಂಹ ನಾಮಾ ||೨||

ಬುದ್ಧಿ ಹಿರಣ್ಮಯದ ಪಾತ್ರೆಯಲಿ ಬೆಳಗುವಾ
ಶುದ್ಧ ಮೂರುತಿ ನಿನ್ನ ಪ್ರಜ್ವಲಿತ ರೂಪವನು
ಸಿದ್ಧಾದಿವಂದಿತನೇ ಶ್ರೀ ರುಕ್ಮಿಣೀ ವರದನೇ
ಸದ್ದು ಮಾಡದೇ ತೆರೆಯ ಸರಿಸಿ ನೀ ತೋರೈಯ್ಯಾ ||೩||

---

## ಕರುಣಾಳು

ಕರುಣಾಳು ನಿನ್ನೊಬ್ಬರತು ಕಾಯ್ವರಾರೀ ಜಗವಾ,
ಹರಿಸೆಯ್ಯ ಭಾನು ಸ್ವರೂಪ ನೀ ಕುಹಕ ವಾ

ಬಲುನೊಂದಿಹುದು ಭವವು ಚಲುವ ನಿನ್ನನು ಮರೆತು
ಬಗೆಗೊಣದೆ ತೊಳಲುತಿದೆ ನಗಧರನೆ ಬೇಗ ಬಾರಯ್ಯ

ಗ್ಲಾನಿಪೊಂದಲು ಧರ್ಮ ಜ್ಞಾನತೇಜದಿನೀನು
ಅವತರಿಸಿ ಆಗಾಗ ಬಂದು ಭೂಮಿಯಲಿ
ಆರ್ತರನು ರಕ್ಷಿಸುತ ದುಷ್ಟರನು ಶಿಕ್ಷಿಸುತ
ಕರ್ತವ್ಯವನು ಬೆಳಗಿ ಸ್ಥಿತಿಸ್ಥಾಪನೆಗೈವೆ ||೧||

ಅನನ್ಯ ಭಕ್ತಿಯಲಿ ಶರಣಾಗಿ ಬಂದವರ
ಘನನೀಲವರ್ಣನೀ ಯೋಗಕ್ಷೇಮವ ವಹಿಸಿ
ಸಲಹುವೆನವರನೆಂಬ ನಿನ್ನ ಶಪಥ ಮರೆಯದೆ
ಒಲಿದು ಪಾಲಿಸಲು ಬೇಗ ಬಾ ರುಕ್ಮಿಣಿವರದಾ

---

## ಹೇಗಾದರೂ ಬಾ

ಮನದಲ್ಲಿ ಮೂಡು ಬಾರೋ ರೂಪ ಸಂಪದ ತೋರೋ
ಘನನೀಲವರ್ಣ ಶ್ರೀಶಾ ಶೇಷಾದ್ರಿವಾಸಾ ||ಪ||

ವ್ಯಾಸ ವಾಲ್ಮೀಕಿಗಳು ಪುರಂದರರು ನಾರದರು
ಆಸೆಯಿಂ ಶ್ರೀ ಕನಕ ಮೀರಾದಿಭಕ್ತೆಯರು

ಜ್ಞಾನದೇವನು ಮತ್ತೆ ವೈಷ್ಣವಾದಿಗಳೆಲ್ಲ
ಆಶಿಸಿದ ಶ್ರೀರೂಪ ತೋರಲವೊ ಶ್ರೀಪತೆ ||೧||

ಕನಕಮಯ ವರ್ಣವೋ ಘನ ನೀಲರೂಪವೋ
ಇನಬಿಂಬದಂತಿರುವ ಮುಖಕಮಲವನು ತೋರೊ
ಆಕಾರರಹಿತ ಸಾಕಾರನೆಂಬುವ ಭೇಧ
ಏಕೆನಗೆ ಹೇಗಾದರೂ ಬಾರೋ ರುಕ್ಮಿಣಿವರದಾ ||೨||

---

## ಭವದ ಮಾಯೆ

ಬಳಲಿದೆನು ಬಳಲಿದೆನು ಭವದಮಾಯೆಯಲ್ಲಿ
ನಳಿನಾಕ್ಷ ನಿನ್ನ ಪದ ಕಮಲವನು ಸ್ಮರಿಸದೇ ||ಪ||

ವ್ಯಾಮೋಹ ಸುಳಿಯಲ್ಲಿ ನಿನ್ನ ಪಾದಾರ್ಚನೆಯ
ರಾಮಾ ಮನೋಹರನೆ ನಿರ್ಲಕ್ಷಿಸುತ ನಾ ಬಂದೆ
ಕರ್ಮ ಮಾಡುವೆನೆಂಬ ಭ್ರಾಂತಿಯಲಿ ಸಿಲುಕೀ
ಮರ್ಮವರಿಯದೆ ಹೋದೆ ಸರ್ವವ್ಯಾಪಕನೆಂಬ ||೧||

ಸಂಸಾರ ಸಾಗರದ ಬೆರಗು ಬುರುಗುಗಳಿಲ್ಲ
ಕಂಸಾರಿ ನಿಸ್ಸಾರ ವೆಂಬರಿವು ದೊರಕಲು ಮತ್ತೆ
ಕಳೆದು ದಾಯುಷ್ಯವೂ ಶಕ್ತಿ ಉಡುಗಲು ಮತ್ತೆ
ಉಳಿದ ಕೆಲಗಳಿಗೆಯಲ್ಲಿ ನಿನ್ನನಾಶಿಸುತ್ತಿಹೆನೂ ||೨||

ರಾಮಣೀಯಕವಾದ ನಿನ್ನದರ್ಶನ ಕೊಡೋ
ಸ್ವಾಮಿ ಚಿನ್ಮಯ ರೂಪ ನಿನ್ನನಾಶ್ರಯಿಸಿದೇ
ಬಿಂಬ ನೀನೇ ಶ್ರೀಶಾ ಅಣುನಾನು ಪ್ರತಿಬಿಂಬ
ಡಿಂಬದಲ್ಲಿ ನೆಲೆಸಿ ಉದ್ಧರಿಸೊ ರುಕ್ಮಿಣಿ ವರದಾ

---

## ಉಗಾಭೋಗ

ಶೇಷಾದ್ರಿವಾಸನೇ ಸಿರಿಪದ್ಮಿನಿಯೊಡೆಯ
ವಾಸುಕೀ ಶಯನಾ ತಿರುಮಲೆಯೊಡೆಯ
ವ್ಯಾಸರಾಜಾರ್ಚಿತ ಪದಕಮಲಶೋಭಿತ
ವಾಸಿಸು ಎನ್ನಲ್ಲಿ ಶ್ರೀಶ ಸದ್ಗುಣಭರಿತ ||೧||

ಸಚ್ಚಿದಾನಂದ ರೂಪಾ   ಜ್ಯೋತಿ ಸ್ವರೂಪಾ
ಅಚ್ಯುತ ಮುರಹರಿ   ಮುಕುಂದ ಮಾಧವಾ
ಸರ್ವಾಧಾರ ಹರಿ   ಸರ್ವೇಶಶ್ರೀವಾಸಾ
ಸರ್ವತ ಒಳ ಹೊರಗೆ ವ್ಯಾಪ್ತನೀ ಶ್ರೀಶಾ   |೨|

ನಿತ್ಯ ಶುದ್ಧನು ನೀನು   ನಿತ್ಯ ಸತ್ಯನು ನೀನು
ನಿತ್ಯ ತೃಪ್ತನು ಸ್ವಾಮಿ   ನಿತ್ಯ ಮುಕ್ತನು ನೀನು
ಅನಾದ್ಯನಂತನು ನೀನು   ಜ್ಞಾನ ಭಾಸ್ಕರ ಭಗರ್ವ
ಸನಾತನಾ ನಿತ್ಯ ನೂತನನೇ   ಪೊರೆಯೊ ರುಕ್ಮಿಣಿ ವರದಾ   ||೩||

---

## ಹರಿಸರ್ವೋತ್ತಮ

ಹರಿಯೆ ಸರ್ವೋತ್ತಮನೆಂಬುದ ಮರೆಯಲಿ ಬೇಡಾ
ಮುರುಳಿಯ ಲೋಲನ ಚರಣ ಕಮಲವ ಬಿಡಬೇಡಾ

ಆದಿತ್ಯನಾಮನಾ   ವಿಷ್ಣು ಸ್ವರೂಪನಾ
ಯಾದವ ಕುಲಜನಾ   ಸ್ಮರಿಸೆಲೆ ಮನ್ಮನಾ
ವೇದವೇದಾಂತನಾ   ರಾಧಾ ಮಾಧವನಾ
ಸಾದರದಿಂದಲಿ   ಬಿಡದೆ ಭಜಿಸು ಮನಾ   |೧|

ಕಾಲದೇಶಗಳಿಗೆ ಹೊರತಾದವನಾ
ನೀಲವರ್ಣನಾ   ತಿರುಪತಿಯೊಡೆಯನಾ
ವಸುದೇವ ತನಯನಾ   ಶೋಕನಾಶನನಾ
ವಾಸುಕಿ ಶಯನನಾ ಶ್ರೀ ರುಕ್ಮಿಣಿ ವರದನಾ   ೨

---

## ಏನು ಧನ್ಯರೋ

ಏನು ಧನ್ಯರೋ ನಿನ್ನ ಕಾಣುವ ಭಕ್ತರೂ
ಸಾನುರಾಗದಿ ನಿನ್ನ ಪಾಡಿ ಪೊಗಳುವರೂ ॥ ಪ ॥

ಉನ್ನತ ಕಾಯನೆ ನಿನ್ನ ಚೆಲುವನೆ ನೋಡಿ
ಸಸ್ತುತಿಸುವರಯ್ಯ ಮುನಿಗಳು ಮುದದಿ
ಮಂದ ಹಸಿತ ವದನಾರವಿಂದ ನೋಡಿ
ತಂದೆ ನೀ ಕಾಯುವಿಯೋ ನಿನ್ನ ಭಕ್ತರನೆಲ್ಲ ॥ ೧ ॥

ಸೌಂದರ್ಯ ಶೌರ್ಯ ಔದಾರ್ಯ ಲಾಲಿತ್ಯ ಪೂರ್ಣನೆ
ಗಂಧರ್ವ ಕಿನ್ನರ ಕಿಂಪುರುಷಯಕ್ಷ ರಾಕ್ಷಸರು
ಇಂದ್ರಾದಿ ಮುಕ್ಕೋಟಿ ದೇವದೇವರುಗಳು ಮನುಜರು
ಚಂದ್ರಮುಖನೆ ನಿನ್ನ ಅನುದಿನ ಪಾಡಿಕೊಂಡಾಡುವರು ॥ ೨ ॥

ಮಂಗಳಾರತಿ ದೀಪ ಧೂಪ ನೈವೇದ್ಯದ
ಕಂಗಳಿಗಾನಂದ ನಿನ್ನ ಪೂಜಾರ್ಚನೆಗಳು
ಗೋವಿಂದಾ, ಗೋವಿಂದಾ ಎಂಬುದು ಕರ್ಣಾನಂದ
ಗೋವಿಂದಾ ನಿನ್ನ ಸ್ಮರಣೆ ಕೊಡೋ ರುಕ್ಮಿಣಿವರದಾ ॥ ೩ ॥

---

## ನಾನರಸಿ ಬಂದೇ

ಭಗವಂತನೇ ನಿನ್ನ ನಾನರಸಿಬಂದೇ ॥ ಪ ॥

ಖಗವಾಹನ ಹರಿ ಶ್ರೀನಿವಾಸನೆ ತಂದೇ ॥ ಅ ॥ ಪ ।

ಭೃಗುಮುನಿಯು ಕೋಪದಿಂ ಪಾದದಿಂ ತಾಡಿಸಲು
ಮುಗುಳುನಗುತ ಭೃಗುಮುನಿಯ ಉಪಚರಿಸೇ

ವರಲಕ್ಷ್ಮಿದೇವಿಯು ಕೋಪದಿ ತೆರಳೆ ಕೊಲ್ಲಾಪುರಕೆ
ಹರಿನೀ ಬಂದೆ ಇಲ್ಲಿಗೆ ಅರಸುತ ಈ ಶೇಷಾದ್ರಿಗೇ || ೧ ||

ಗೊಲ್ಲನ ಧೇನುವು ಕರೆಯೆ ನಿತ್ಯವು ಕ್ಷೀರ
ಸಲ್ಲಲಿತಾಂಗ ವಾಸಿಸಿದೆ ನೀ ವಾಲ್ಮೀಕದಲ್ಲಿ
ಕಂಡದ ಚೋಳ ರಾಜನತ್ಯುಗ್ರ ಕೋಪದಲಿ
ತುಂಡರಿಸಲು ಬರೆಬೇಗ ನೀ ತಲೆಯೊಡ್ಡಿದೆ || ೨ ||

ಹರಿವ ರಕ್ತದ ಧಾರೆ ನೋಡಲಾರದೆ ಚೋಳ
ಶಿರವ ಪಿಡಿವೊಡನೆ ಮೂರ್ಛೆಯನು ಪೊಂದಲು
ತಾಪವನು ನೀಡಿದೆ ಪಿಶಾಚಿಯಾಗೆನುತವಗೆ
ಶಾಪವನು ತಡೆಯುತೆ ಬಂದೆ ಬಕುಳೆಯ ಬಳಿಗೇ || ೩ ||

ಮೃಗಯಾ ವಿಹಾರಕೆ ಶೃಂಗಾರದಿಂ ನೀ ಪೋಗಿ
ಗಗನ ರಾಜನ ಪುತ್ರಿ ಪದ್ಮಿನಿಯನು ಮೋಹಿಸಿ
ಬಕುಳದೇವಿಯನಟ್ಟೆ ಆಕ್ಷಣ ಆಕಾಶರಾಜಪುರಕೆ
ಸುಕುಮಾರಿ ಕೊರವಂಜಿ ರೂಪಧರಿಸಿ ನೀ ಪೋದೇ || ೪ ||

ಗಗನರಾಜನ ರಾಣಿಗೆ ಮಗಳ ತಾಪವನರುಹಿ
ಮಿಗಿಲಾಗಿ ಸರ್ವದೇವ ಗಂಧರ್ವರೊಡಗೂಡಿ
ಸಡಗರದಿಂದಲಿವರಪದ್ಮಿನಿಯಕರ ಪಿಡಿದು
ಒಡೆಯನೆಲೆಸಿಹೆಯಂತೆ ಈ ಶೇಷಾದ್ರಿಮಂದಿರದಿ || ೫ ||

ಬೇಡಿದಿಷ್ಟಾರ್ಥವನು ನೀಡುತ್ತ ಭಕ್ತರಿಗೆ
ನಾಡುನಾಡಿನಿಂ ಬರುವ ಬಹುಜನಗಳಿಗೆ
ಶಂಖಚಕ್ರಗದಾ ಭೂನೀಳಾ ಸಮೇತದಿ
ಸಂಕಟ ಹರಿಸುವೆಯಂತೆ ರುಕ್ಮಿಣಿವರದಾ || ೬ ||

———

## ನಿನ್ನ ವೈಪರೀತ್ಯಗಳು

ಯಾರರಿಯ ಬಲ್ಲರೋ ವೈಪರೀತ್ಯಗಳಾ
ಯಾರು ತಿಳಿಯಬಲ್ಲರೋ ನಿನ್ನ ಲೀಲಾವಿನೋದಗಳಾ || ಪ ||

ಮೂಡು ದಿಶೆಯಲ್ಲಿರುವ ಶೈಲಾದ್ರಿಯಲ್ಲಿ
ಕಾಡುಮೇಡುಗಳಲ್ಲಿ ನಾಡಾಡಿಯಂತೆ
ಬೇಡುವರ ಇಷ್ಟಾರ್ಥ ಸಿರಿದೇವಿಯೊಡನೆ
ನೀಡುತ್ತ ನಿಂತಿರುವ ಚಕ್ರಧರನೇ ಶ್ರೀಶ ||೧||

ಕೋಪತಾಪಗಳಂತೆ ಆಸೆ ಬಯಕೆಗಳಂತೆ
ಶ್ರೀಪತಿಯೇ ನಿನಗುಂಟೆ ನೀ ಕರ್ಮರಹಿತಾ
ತಾಪತ್ರಯಾ ದೂರಾ ನಿನಗುಂಟೆ ತಾಪಗಳು
ಪಾಪನಾಶಕ ನೀನು ಇರಲಿ ಈ ಕಥೆಗಳು ||೨||

ಆಯಾಯ ಕಾಲಕ್ಕೆ ಆಯಾಯ ವೇಷದಲಿ
ರಾಯನೀ ಸಲಹುವೆಯೊ ಜಗದ ಜನರ
ಭ್ರಾಂತಿಯಾ ಸುಳಿಯಲ್ಲಿ ಮುಳುಗೇಳುವವರೀಗೆ
ಶಾಂತಿಯನು ಕರುಣಿಸೆಲೊ ರುಕ್ಮಿಣಿವರದಾ ||೩||

---

## ನಿನ್ನ ವೈಭವ

ಬಡವ ಬಲ್ಲಿದನೆಂಬ ಭೇದವೇ ನಿನಗೇ
ಕಡುಬಡವನಾದ ಕುಚೇಲ ಗೊಲಿದವಗೇ
ಕಲ್ಯಾಣವಿಭವವಂತೆ ಪೂಲಂಗಿ ಸೇವೆಯಂತೆ
ಮಲ್ಲೆ ಮಲ್ಲಿಗೆ ಜಾಜಿ ಬಕುಳ ಕೋಮಲೆಗಳಂತೆ

ಎಲ್ಲಿಂದ ನಾತರಲೀ   ನೀ ಕೊಟ್ಟಿದ್ದರಲ್ಲವೇನೋ
ಸಲ್ಲಲಿತಾಂಗನೇ ಅರ್ಪಿಸುವೇ ಭಕ್ತಿ ತುಳಸಿಯನೂ ||೧|

ವಜ್ರ ವೈಢೂರ್ಯ   ಗೋಮೇದಿಕ ನವರತ್ನದಿಂ
ಸಜ್ಜಾದಾಭರಣಗಳ   ನಿನಗೆ ಸಿಂಗರಿಸರಂತೆ
ಮಿಸುನಿಕವಚವಂತೆ   ಎಸೆವ ಮುಕುಟವಂತೆ
ವಸುಧೆಯನಾಳ್ವ ನಿನಗೆ   ನಾನಾ ಶೃಂಗಾರವಂತೆ ||೨||

ಹಿಡಿಹಿಡಿಹಣವನು ಮುಡುಪಿಗೊಯ್ಯುವರಂತೆ
ನಡೆಮುಡಿ ಹಾಸಿ ನಿನ್ನ ಮೆರೆಸುವ ಭಕ್ತವರಂತೆ
ಕಾಯಮನಸೂ ವಾಕ್ಕು   ಸರ್ವವು ನಿನ್ನದೆಂದು
ಜೀಯ ಶೇಷಾದ್ರಿವಾಸಾ   ಬಂದಿಹೆ ಬರಿಗೈಯಲಿ ||೩||

ಮಂದಿರಕೆ ಬಂದಿರುವೆ ಏಳು ಬೆಟ್ಟದ ಸ್ವಾಮಿ
ಚಂದದಿಂ ಕೈಪಿಡಿದು ನಡೆಸಿಕೋಬಾರದೇ
ತೋಯಪತ್ರ ಪುಷ್ಪ ಫಲಗಳೇ ಸಾಕೆಂದು
ತೋಯಜಾಕ್ಷನೇ ನೀ ತಿಳಿಸಿಹೆ ರುಕ್ಮಿಣಿ ವರದಾ ||೪||

— —

## ಬಂದಿರುವೆ

ಬಂದಿರುವೆ   ನಿನ್ನಲ್ಲಿಗೆ ಶ್ರೀ ಶ್ರೀನಿವಾಸಾ
ತಂದೆ ಬಂದೆನ್ನ ಕೈಪಿಡಿಯೊ ಶ್ರೀನಿವಾಸಾ
ಹಾಡುತ್ತ ಪಾಡುತ್ತ ಆಡುತ್ತ ನಡೆಯುತ್ತ
ಗಾಡಿಕಾರನೆ ಬಂದಿ ನಾ ಏಳು ಬೆಟ್ಟವ ಹತ್ತಿ ||೧ |

ಅಗಣಿತ ಗುಣಗಣ ನಿನ್ನ ಪೊಗಳಿ ಪಾಡಲು
ನಿಗಮಾಗಮ ಸೋತಿರಲು ನಾಂಪಾಡಿ ||೨||

ಕಾಲವು ಕಳೆದುದು ವರ್ಷಬಹಳಾಯಿತು
ಸೀಲವರ್ಣನೆ ನಿನ್ನ ನೋಡದೆ ವ್ಯಾಕುಲವಾಯ್ತು ||೩||

ಸರಸವಾಕ್ಯಗಳಿಂದ ಸುಮಧುರಗೀತದಿಂದ
ಸರಸಿಜ ನಯನನೇ ಪೊಗಳಲಿನ್ನಳವೆ ನಿನ್ನ ||೪||

ಸತ್ಯಸ್ವರೂಪನೆ ದರ್ಶನಾಕಾಂಕ್ಷೆಯಿಂ
ನಿತ್ಯನೆ ಬಂದಿಹೆ ಪೊರೆಯೊ ರುಕ್ಮಿಣಿವರದಾ ||೫||

## ಚಿಂತೆಯೇತಕೆ ?

ಎಂದು ಕರೆಸಿಕೊಳ್ವೆಯೆಂಬ ಚಿಂತೆಯೇತಕೆ
ಮುಂದೆ ದಾರಿ ಕಾಣುತಲಿರಲು ಸಂದೇಹವೇತಕೆ ||ಪ||

ದೂರದಾರಿ ಸಾಗಲಾರೆ ಎಂಬ ಭಯವದೇತಕೆ
ನೇರವಾಗಿ ನಿನ್ನ ಮನೆಗೆ ಬರಲು ಇತರರೇತಕೆ ||೧||

ಕಂಡಕಂಡವರ ಬೆನ್ನುಹತ್ತಿ ಹೋಗಲೇತಕೆ
ಸಿಂಧು ಶಯನ ಹರಟೆಯುಲ್ಲಿ ಹೊತ್ತು ಕಳೆಯಲೇತಕೆ ||೨||

ನಂಬಿರಲು ನಿನ್ನ ಶ್ರೀಶ ಸರ್ವಸ್ವನೆಂದು ಜೀವವು
ಬೆಂಬಿಡದೆ ರುಕ್ಮಿಣಿವರದ ಕಾಯಲೇಕೆ ಶೋಕವು ||೩||

## ಮುದ್ದು ಮಾರುತಿ

ಈ ಮುದ್ದು ಮಾರುತಿಯು ನೆಲೆಸಿಹುದು ನೋಡೂ
ಹೃದಯಗಂಹ್ವರದಲ್ಲಿ ಸುಳಿದಾಡುತಿದೆ ನೋಡೂ ||ಪ||
ಶಂಖ ಚಕ್ರ ಗದೆಯ ಲೀಲಾಕಮಲವನು ಪಿಡಿದು
ಶಂಕೆಯಿಲ್ಲದೆ ಜಗದ ಸಂರಕ್ಷಿಸುತ್ತಿದೆ ನೋಡೂ ||ಅ||ಪ||

ಸಪ್ತ ಗಿರಿಗಳನಡುವೆ ಕಾನನದ ಮಧ್ಯದಲ್ಲಿ
ಸತ್ಪಥವ ತೋರುತಲಿ ಗಿರಿಯಗಹ್ವರದಲ್ಲಿ
ಎಂಥ ತೇಜೋಮೂರ್ತಿ ನಯನಾಭಿರಾಮವೂ
ಸಂತರಿಂ ಪೂಜಿತವು ಸಚ್ಚಿದಾನಂದವೂ ||೧||

ವ್ಯಾಸರಾಮಾನುಜರು ಸಂತ ಶ್ರೀ ಪುರಂದರರು,
ಶ್ರೀಶನಾಭಕ್ತರೂ ಅಗಣಿತರು ಪೂಜಿಸಲು
ಏನು ಭವ್ಯಾಕಾರ ಏನು ಭೀಮಾಕಾರವೊ
ಜ್ಞಾನನಿಧಿ ಶ್ರೀ ವಾದಿರಾಜಸ್ವಾಮಿಯಿಂದರ್ಚಿತವೂ ||೨||

ಮಹತೋ ಮಹೀಯನೂ ಈಮೇರುದಂಡದಲ್ಲಿ
ಸಹಜ ಗುಣದಿಂ ಸಪ್ತ ಚಕ್ರಗಳ ಮಧ್ಯದಲ್ಲಿ
ಹೃದಯಗಿರಿಗಹ್ವರದಿ ಈ ಭಕ್ತ ಮಂದಿರದಿ
ಸದಯ ರುಕ್ಮಿಣಿವರದ ನೆಲೆಸಿಹನು ನೋಡಿಲ್ಲಿ ||೩||

## ಮಾನಸ ಸಂಚಾರಿ

ಮಾನಸ ಸಂಚಾರಿ ಶ್ರೀ ಹರಿ ||ಪ||

ವರಪೀತಾಂಬರಧಾರಿ ಮುರಾರಿ
ಸರಸ ಸುಂದರ ರೂಪ ಶೋಭಿತ ಶೌರೀ ||ಅ||ಪ||

ವರವೇದೋದ್ಧಾರಿ ಕೂರ್ಮಾವತಾರೀ
ವರಹ ನಾರಸಿಂಹ ವಾಮನಭಾರ್ಗವ
ರಾಮ ಕೋದಂಡಪಾಣೀ ಶ್ರೀ ಯದುನಂದನ
ಭೀಮ ಬೌದ್ಧ ಕಲ್ಕಿ ದಶವಿಧರೂಪಧರೀ ||೧||

ಸುರನರಸನ್ನುತ ಸೇವಿತಚರಣಾ
ತಿರುಪತಿ ಗಿರಿವಾಸಾ ವೇಂಕಟರಮಣಾ
ಸಿರಿದೇವಿ ಪದ್ಮಿನಿ ಹೃದಯಾಭರಣಾ
ವರದ ರುಕ್ಮಿಣೀ ಶರಣಾಗತಭರಣಾ ||೨||

## ರಾರಾಜಿಸುವನು

ರಾರಾಜಿಸುವನು ಸಖೀ ನೋಡಿಲ್ಲಿಯೇ
ಮುರಾರಿ ಸಖ ಶ್ರೀ ಗಿರಿವಾಸ ಹೃದಯದಲಿ ||ಪ||

ಹೃದಯ ಮಧ್ಯದಲಿ, ಪದುಮಪುಷ್ಪದಲಿ
ಸದಯ ಶಂಖಚಕ್ರ ಚಾಪ ಶಾರ್ಙ್ಗಧರಾ
ಯದುನಂದನ ಶ್ರೀ ಶ ಶ್ರೀ ವೆಂಕಟರಮಣಾ
ಮುದದಿಂದ ನಿಂತು ಕಾಯುತಲಿರುವನು ||೧||

ಭಕ್ತರ ಬಂಧೂ ಕರುಣಾಸಿಂಧೂ
ಮುಕ್ತಿಪ್ರದಾತಾ ಗಿರಿಯಲಿನಿಂದೂ
ಕೋರಿದವರ ಮನಭೀಷ್ಟವ ಸಲಿಸುತ
ತೋರುತಲಿರುವನು ಮಹಿಮೆಯನಿವನೂ ||೨||

ಸಿರಿದೇವಿ ಪದ್ಮಿನಿ ಸಹಿತದಿ ಸ್ವಾಮಿಯೊ
ನಿರುತವು ವಿಧ ವಿಧ ಪೂಜೆಯುಗೊಳ್ಳುತ
ಪರಮಾದರದಿಂದ ಪಾಡಲು ಭಕ್ತರು
ವರದ ರುಕ್ಮಿಣಿಯೂ ಪಾಲಿಸುತಿರುವನು ||೩||

## ದರುಶನ

ಶ್ರೀ ವೆಂಕಟೇಶನ ದರುಶನಕೆ ಬನ್ನಿ ||ಪ||

ವೆಂಕಟರಮಣನಾ ಕಿಂಕರವರದನಾ
ಶಂಕರಪ್ರಿಯನಾ ಸಂಕಟಹರನಾ |ಅ||ಪ

ದಿನಕರಕೋಟಿತೇಜನಾ ಇನವಂಶದೀಪನಾ
ದನುಜಸಂಹಾರನಾ ಮನ್ಮಥನಪಿತನ
ಕರುಣಿಗ ?ರಸನಾ ಶರಣರಾಧಾರಕನಾ
ತರುಣಿಯುಹಲ್ಯೆಯ ಶಾಪವಿಮೋಚನನಾ ||೧||

ಯೋಗಿಗಳರಸನಾ ಭೋಗಿರಾಜಶಯನನಾ
ರಾಗಭೋಗಾದಿರಹಿತನಾ ಭಾಗ್ಯವಂತನಾ
ಭವ್ಯವಿಗ್ರಹನಾ ದಿವ್ಯಪ್ರಕಾಶನಾ
ಸವ್ಯಸಾಚಿಪ್ರಿಯ ರುಕ್ಮಿಣಿವರನನಾ ||೨||

## ನೀನೇಕೆ ನಿಂದಿಹೆ

ನೀನೇಕೆ ನಿಂದಿಹೆಯೋ ಶೇಷಾದ್ರಿ ಮಧ್ಯದಲ್ಲಿ
ಇಲ್ಲೇನು ಕೆಲಸವೋ ಭಕ್ತಪ್ರಿಯನೇ ನಿನಗೇ ||ಪ||

ಕರಿರಾಜನ ಕಾಯ್ದವನೇ  ದ್ರೌಪದೀಮಾನರಕ್ಷಕನೇ
ನರಸಿಂಹನಾಗಿ ತರಳ  ಪ್ರಹ್ಲಾದನ್ನ ಕಾಯ್ದವನೇ
ನಾರಾಯಣನೆ ನೀನೇ ಕಾಂತವಬಯಸೀ  ||೧

ಸಿರಿಪದ್ಮಿನಿಕರಪಿಡಿದು ಯದುನಾಥ ನೀನಿಲ್ಲಿ
ವರಗಳನು ಕೊಡುತಲಿ  ಭಕ್ತಜನರಿಗೆ ಇಲ್ಲಿ
ಪರಿಹರಿಸುತವರ ತಾಪವನು ನೀನಿಲ್ಲಿ  ||೨||

ಧರೆಯನಾಳುತ ಸ್ವಾಮಿ  ಸಿರಿಯನಾಕರ್ಷಿಸುತ
ಕರುಣಾಳು ಮಲೆಯಲ್ಲಿ ನೆಲೆಸುತಲಿ ನೀನು
ಭರದಿ ಲೋಕವಕಾಯ್ದ ರುಕ್ಮಿಣಿವರದನೇ  ||೩||

## ನಾಮ ಸ್ಮರಣೆ

ನಾರಾಯಣಾ ನಿನ್ನ ನಾಮ ಸ್ಮರಣೆಯೊಂದಿರೆ
ಬಾರವು ಎಂದಿಗೂ ಘೋರದುರಿತಗಳು  ||ಪ||

ಬಾರಿಬಾರಿಗು ಕಾಯ್ವ ಭಕ್ತವೃಂದವಾ
ನಾರಾಯಣಾ ನಾಮಸ್ಮರಣೆಯೊಂದಿರಲು  ||ಅ||ಪ||

ಅಂದು ಅಜಮಿಳಗೊಲಿದು ಬಂದ ನಾಮ
ಕಂದನ ಕಾಯ್ದು, ಕಂಭದಿಂದೊಡೆದನಾಮ
ಗಜರಾಜನ ನಕ್ರ ದುಷ್ಟದಂಶನದಿಂದ
ಮಿಗೆ ಹರುಷದಿ ಪಾಲಿಸಿದ ದಿವ್ಯನಾಮ  ||೧||

ತುಂಬಿದ ಸಭೆಯಲಿ  ಮಾನಭಂಗವ ಮಾಡಲು
ಕಂಬನಿ ತುಂಬಿ ಕರೆಯೆ ಪಾಂಚಾಲಿಯು

ಶರಣಾಗತ ಹರಿ ಕೃಪೆಮಾಡು ಎನ್ನಲು
ವರವಸನವಪಾಲಿಸಿ ದುರುಳನ ಭಂಗಿಸಿದ ||೨||

ಪರಿಪರಿವಿಧದಲ್ಲಿ ಕಾಯುವೆ ಭಕ್ತರಾ
ಸರಿಯಾರು ನಿನಗೇ ಶೇಷಗಿರಿವಾಸಾ
ವರವೇಂಕಟ ಹರಿ ರುಕ್ಮಿಣಿ ವರದಾ
ಪೊರೆವುದು ಜಗವಾ ನಿನ್ನ ದಿವ್ಯನಾಮವೂ ||೩||

## ಮುಕುಂದ ಮಾಧವ

ಮುಕುಂದ ಮಾಧವ ಗೋವಿಂದ ಶೌರೀ
ನಂದಾನಂದನ ಯದು ಚಂದ್ರ ಮುರಾರಿ ||ಪ||
ವರಪೀತಾಂಬರಧಾರಿ ಶ್ರೀ ಹರಿ
ಸುರಪೂಜಿತ ಶ್ರೀಶ ಚಕ್ರಧಾರಿ ||ಅ|ಪ||

ಅರುಣಾಧರ ಚುಂಬಿತ ವೇಣುಧಾರೀ
ಕರುಣಾಕರ ಶ್ರೀಶ ದುರಿತಾಪಹಾರಿ
ವರಯಮುನಾತಟ ಕುಂಜವಿಹಾರೀ
ಶರಣಾರ್ತಪಾಲನಾ ಕೃಷ್ಣ ಮುರಾರೀ ||೧||

ಜಯ ಜಯ ಸುರನರ ಪೂಜಿತ ಶ್ರೀಶಾ
ಜಯ ಜಯ ಪದ್ಮಿನಿ ಹೃದಯನಿವಾಸಾ
ಜಯ ಜಯ ಸಪ್ತಗಿರಿ ಶೃಂಗಾವಾಸಾ
ಜಯ ರುಕ್ಮಿಣೀ ವರದ ಶ್ರೀನಿವಾಸಾ ||೨||

## ಭಕ್ತ ಮನ ತೋಷಾ

ಶೇಷಾದ್ರಿ ಗಿರಿವಾಸಾ  ಶ್ರೀ ಶ್ರೀನಿವಾಸ
ಈಶಾ, ಸರ್ವೇಶಾ  ಭಕ್ತಮನ ತೋಷಾ ||ಪ||

ಮಕರ ಕುಂಡಲಧರ  ಮಣಿಭೂಷಣ ಗಾತ್ರ
ಸಕಲ ಶೃಂಗಾರ ಶೋಭಿತ  ಅಕಳಂಕ ಚರಿತ್ರ
ನಿಗಮ ಗೋಚರ ಶ್ರೀಶ  ಶಂಖುಚಕ್ರಧರಾ
ಗಗನರಾಜಪುತ್ರಿ ಶ್ರೀ ಪದ್ಮಿನೀರಮಣಿವರಾ ||೧||

ಶರಣಹೃದಯಾವಾಸಾ  ಶ್ರೀವೆಂಕಟೇಶಾ
ಪರಮಪುರುಷ ಹರಿ  ಶ್ರೀ ವೀರವೇಷಾ
ವರದ  ರುಕ್ಮಿಣಿ ಹೃದಯ ವಾಟಿಕಾ ಮಂದಾರಾ
ಗರುಡ ಗಮನದೇವಾ  ಶ್ರೀದೇವಿ ಶೃಂಗಾರಾ ||೨||

## ಅಂತರಂಗದಲ್ಲಿ ನೆಲೆಸಿಹಾ ಸ್ವಾಮಿ

ಎನ್ನಂತರಂಗದಲಿ ನೆಲೆಸಿಹಾಸ್ವಾಮಿ ನೀನೇ
ಪನ್ನಗಾರಿಧ್ವಜ ವೆಂಕಟಗಿರಿವಾಸನೇ | ಪ||

ಸನ್ನುತ ಗುಣಪೂರ್ಣ  ಸಕಲಾಗಮ ಪೂಜಿತ
ಘನ್ನ ಮಹಿಮ ಹರಿ  ಪದ್ಮಿನಿ ಪ್ರಾಣನಾಥಾ ||ಅ|ಪ|

ಹಾರಾಕೇಯೂರಾ ಕೌಸ್ತುಭ ಮಣಿ ಮಂದಾರಾ
ನಾರಾಯಣಾ ಶ್ರೀಶಾ  ಮುದ್ದು ಮೋಹನ ಸುಂದರಾ

ಕಾರುಣ್ಯ ಸಾಗರ ಹರಿ ಸಿರಿಪದ್ಮನಿವರಾ
ಪಾರುಗಾಣಿಸು ಎನ್ನ ಭವದ ಬಂಧನದಿಂದಾ ||

ಧೂಪ ದೀಪ ಮತ್ತೆ ನೈವೇದ್ಯವೆಲ್ಲವನೂ
ಶ್ರೀಪತಿಯೆ ನಿನಗಾಗಿ ತಂದಿಹೆಕೊಳ್ಳೊ
ಬಂದಿಹೆ ಬಾಗಿಲಿಗೆ ಹೃದಯ ಪುಷ್ಪವತಂದು
ಕಂದರ್ಪ ಪಿತ ಮುಡಿಯೊ ರುಕ್ಮಿಣಿವರದನೇ ||

## ಯಾರುಕಾಯ್ವರೋ

ಯಾರು ಕಾಯ್ವರೊ ನಿನ್ನ ಹೊರೆತು ಶರಣರನೂ
ಮಾರನಯ್ಯಾ ಶ್ರೀಶ ನೀನಲ್ಲದೇ ಭಕ್ತರನೂ ||ಪ||
ಹರಿಯೆ ಸರ್ವೋತ್ತಮನೆಂದು ನಂಬಿಹ ಮಂದಿ
ಬರಿದೆ ಪೋಗುವರೇನೋ ಇತರ ದೈವರನಂಬಿ ||ಅ||ಪ||

ಧರ್ಮ ಸ್ಥಾಪನೆಗಾಗಿ ಯುಗ ಯುಗದಿ ಬಂದು
ಕರ್ಮ ಯೋಗವ ತಿಳುಹಿ ಅದರಂತೆ ನಡೆದು
ಭವದ ಬವಣೆಗಳನ್ನು ಅನುಭವಿಸಿ ನಿಂದು
ಜೀವನ ಚಕ್ರದಿಂದ ಜೀವರ ಉದ್ಧರಿಸಲೆಂದು ||೧||

ಸಾಧುಗಳ ರಕ್ಷಿಸುತ ದುಷ್ಕರ್ಮ ಖಂಡಿಸುತ
ಭೇದವಿಲ್ಲದೆ ಪ್ರೇಮ ವರ್ಷವನು ಸುರಿಸುತ್ತ
ಶೇಷ ಗಿರಿಯಲಿ ನಿಂತೆ ಪೂಜೆಯನು ಕೈಕೊಳುತೆ
ಈಶ ರುಕ್ಮಿಣಿ ವರದ ಪೊರೆಯೋ ನೀ ತಂದೇ

## ವಿಶ್ವರೂಪ

ವಿಶ್ವ
ರೂಪವು ತಾನಂತೇ ಹರಿ ಎಲ್ಲೆಲ್ಲಿಯು ತಾನಿಹನಂತೇ
ಮುಳ್ಳುಗಳಲಿ ವಾಸವಾಗಿಹರಿ ಅಲ್ಲಲ್ಲನ್ನವನೀಯುವನಂತೇ ||ಪ||
ಕಲ್ಲು ಸಹಸ್ರ
ಶೀರ್ಷನು ತಾನಂತೇ ಹರಿ ಸಹಸ್ರ ಬಾಹುವು ಅವಗಂತೇ
ಊರು ಪಾದವು ಇಹುದಂತೆ ಬ್ರಹ್ಮಾಂಡನಾಯಕನವನಂತೇ ||೧||
ಸಹಸ್ರ
ನು ಜಡದೊಳುವಾಸಿಪನಂತೆ ಅನಂಗನ ಪಿತನು ಅವನಂತೇ
ಪೊಳಿರುತಿಹ ಭಕ್ತರ ಕಾಯುವ ತಿಂಗ ಮಹಿಮನಂತೇ ||೨||
ಹಗೆಡೊಳಿರ್ದು
ನೆಲೆಸಿಹಾ ಸಪ್ತ ಶೈಲದಿ ಭಕ್ತರ ಕಾಯಲಿಕೆಂದಂತೇ
ರಮಣಾ ರುಕ್ಮಿಣಿ ವರದನಾ ನೆನೆದವರಿಗೆ ಭಯವಿಲ್ಲಂತೇ ||೩||

## ಹರಿ ನೀಕಾಯೊ

ಹರಿ ನೀ ಕಾಯೋ ಹರಿ ನೀಕಾಯೊ
ಕಾಯೋ ತಿರುಪತಿ ಗಿರಿವಾಸಾ
ನಾಕು ತರು ||ಪ||
ಕರೆದರೆ ಬೇಗನೆ ಬರುವಾ
ಕಟ್ಟ ರಮಣ ಸುಜನರ ಕಾವಾ
ಲಕ್ಷ್ಮಿ ರಮಣ ||ಅ॥ಪ||
ಗೊಲಿದವ ಸುಜನರ ಪೊರೆವವ
ಟಿತ ವಿಷ್ಣು ಮಾಧವ ಕೇಶವ
ಭಕ್ತರ ಹೃದಯ ಮಂಟಪದಲ್ಲಿ
ಲೆಸುವ ಸ್ವಾಮಿ ರಮಾಧವ ||೧||

ತುಲಸೀಮಾಲಾಧರಾ ಪದ್ಮಿನೀವರಾ
ಬಲರಾಮಾನುಜ ಕಂಬುಕಂಧರಾ
ವರಪೀತಾಂಬರ ಕಡಗ ಕಂಕಣಧರಾ
ವರದ ರುಕ್ಮಿಣಿ ಶ್ರೀಶ ಕರುಣಾಕರಾ ||೨||

## ಉಗಾಭೋಗ

ಶೇಷಗಿರೀಶನಾ ದೋಷರಹಿತನಾ
ಶ್ರೀಶ ಶ್ರೀನಿವಾಸಾ ಪದ್ಮಿನಿಯರಸನಾ
ವೇದೋದ್ಧಾರನಾ ಮುನಿಗಳೊಡೆಯನಾ
ನಾದೋಪಾಸನೆಯಿಂದಲಿ ತಿಳಿದುನಾ ||೧||

ಕರುಣಾಂತರಂಗನಾ ಭಾನುಕಿರಣ ಪ್ರಕಾಶನಾ
ಶರಣರಿಗೊಲಿದನಾ ಧೇನು ನರಕ ಭಂಜನನಾ
ಪರಮ ಪುರುಷ ಹರಿ ಶ್ರೀ ವಾಸುದೇವನಾ
ಧರುಮ ಸಂಸ್ಥಾಪಕಾ ಶ್ರೀಗಿರಿವಾಸನಾ ||೨||

ಪಾಂಡವ ಪಕ್ಷನಾ ಪೂರ್ಣಸ್ವರೂಪನಾ
ತಾಂಡವಶಿವಪ್ರಿಯ ಗುಣ ಪರಿಪೂರ್ಣನಾ
ರುಕ್ಮಿಣಿ ವರದನಾ ಸತ್ಯ ಸಂಕಲ್ಪನಾ
ರುಕ್ಮಿಯ ಖಂಡಿಸಿದ ಶ್ರೀ ಮನ್ನಾರಾಯಣನಾ ||೩||

## ನಂಬಿಕೆ

ನಂಬಿ ಬಂದಿಹೆ ನೋಡೊ ಶ್ರೀವೇಂಕಟನಾ ನೀದಯಮಾಡೊ ||ಪ||

ದೂರ ದೂರದ ಊರು ಬಲು ದೂರ ಸಾಗಿಹುದು
ಪಾರುಗಾಣದು ಇನ್ನು ಭವ ಭಂಗ ಹಿಂಗದು

ಯಾರು ಕಾಯುವರಿಲ್ಲ ನಿನ್ಹೊರತು ಎಂದೂ
ಚಾರು ನೇತ್ರನೆ ನಿನ್ನ ಬಳಿಯಲ್ಲಿ ಬಂದೂ ||೧||

ಜನನ ಮರಣದ ಚಕ್ರ ಸುಳಿಯಲ್ಲಿ ಸಿಲುಕೀ
ಇನ ಕುಲಜ ನಿನ್ನ ಬ್ರಹ್ಮಾಂಡದಲಿ ಹುಡುಕೀ
ಶೇಷಗಿರಿಯಲಿ ನೀನು ಭಕ್ತರಿಗೊಲಿಯುತ್ತ
ವಾಸುದೇವನೆ ಕರುಣೆ ತೋರುತ್ತಲಿರುವೆಂದು ||೨||

ನಿನ್ನ ಬಳಗಗಳವರು ಬಂಧುಬಾಂಧವರು
ಮುನ್ನ ಮುನಿಗಣಗಳು ಸಾಧುಸಂತರುಗಳು
ಚಿಣ್ಣ ಅಗಣಿತರಿರಲಿ ಎನಗಿಷ್ಟು ಸ್ಥಳ ತೋರು
ಘನ್ನಮಹಿಮನೆ ರುಕ್ಮಿಣೀ ವರದದಯೆಬೀರೂ ||೩||

## ನಿನ್ನದೀಪಾ

ತವಕಿಸಿ ಬಂದಿಹೆ ದಾರಿಗನಿಗೆ ನೀ
ದೊರಕಿಸಿ ಕೊಡೆಲೊ ನಿನ್ನ ದೀಪಾ
ಎಂದಿಗು ಆರದ ಎಲ್ಲೆಲ್ಲು ಬೆಳಗುವ
ಸುಂದರ ಪ್ರಣತಿಯ ನಂದಾದೀಪ ||ಪ||

ಹಿಂದೆ ಕಾರ್ಗತ್ತಲೆ ಮುಂದೆ ಕತ್ತಲೆ ಬಯಲು
ಇಂದಿರೆ ರಮಣಾ ಗತಿಯೇನು ಎನಗೆಂದು
ಶೂನ್ಯದಲಿ ದೃಷ್ಟಿಯನಿಟ್ಟು ಪಾಂಥನು ತಾನು
ಪೂರ್ಣ ಸ್ವರೂಪನೆ ಶ್ರೀಶ ನಿನ್ನನರಸುವನು ||೧||

ದೀಪ ಉರಿಯುತಿದೆ ಹೃದಯಾಂತರಾಳದಿ
ಪಾಪ ಮುಸುಕಿದೆ ಮಾಯೆಯು ಮುಸುಕು
ತೆಗೆಯಲಶಕ್ತನು ಪಾಂಥನು ಬಂಧಿತನು
ತೆಗೆದೊಗೆಯುಲಾರೆಯಾ ರುಕ್ಮಿಣಿ ವರದನೇ ||೨||

## ಅಪರಾಧ

ಎನ್ನದೇ ಅಪರಾಧವೆಂದರಿತೆ ನಾನೂ ||ಪ||
ಸನ್ನುತನೆ ಗುಣದೋಷರಹಿತ ನೀನೂ ||ಅ || ಪ||

ಕಾಕುಮನುಜರ ಕೂಡಿ ಕುತ್ಸಿತವ ನಾನಾಡಿ
ಬೇಕುಬೇಕೆಂದು ಈ ಭವದ ಭವಣೆಯ ಪಾಡಿ
ಜನನ ಮರಣದ ಚಕ್ರ ಸುಳಿಯಲ್ಲಿ ಈಡಾಡಿ
ವನಜನಾಭನೆ ನಿನ್ನ ಮರೆತು ಜಗದಲ್ಲೋಡಿ ||೧||

ನಿನ್ನ ಸೇವೆಯೊಂದೇ ಸಾಕೆಂದು ಬಯಸದೇ
ಇನ್ನು ಏನೇನಿಹುದೋ ಜಗದಲ್ಲಿ ಆಶಿಸಿದೆ
ನಿನ್ನೊಂವೆ ಕರುಣೆಯಿಂ ಪ್ರಭೆಯಾಗ ಗೋಚರಿಸೆ
ಇನ್ನೊಂದ ಬೇಡುವುದೆ ಜೀವ ರುಕ್ಮಿಣಿ ವರದಾ ||೨ ||

## ಬರ ಬಾರದೇ

ಕರೆದರೆ ಬರಬಾರದೇ ಸಿರಿರಮಣ ಎನ್ನ ಹೃದಯದಲೀ ||ಪ||
ಶುಚಿಯಾಗಿಹುದು ಈ ಮಂದಿರವೂ
ಮಧ್ಯದಿ ಶೋಭಿಸೆ ಇಂದೀವರವೂ
ಮಾರಪಿತನೆ ನಿನ್ನ ಆರೋಗಣೆಗೇ
ಸಾರಸರ್ವಸ್ವವ ಅರ್ಪಿಸಿ ನಿಂದಿಹೆ ||೧||

ಮುರುಳೀರವದಾ   ಮನದಾ ಮೋದದಾ
ಕಿರುಗೆಜ್ಜೆಯ ಘಲ್ ಘಲ್ ನಿನದದಿಂದಾ
ಬಾರೆನ್ನ ಹೃದಯದಿ   ರುಕ್ಮಿಣಿವರದಾ
ತೋರಯ್ಯ ಶ್ರೀ ರೂಪ   ವೆಂಕಟವರದಾ   ||೨||

## ನಾಟ್ಯ

ನಾಟ್ಯವನಾಡೂ  ಎನ್ನ ಹೃದಯರಂಗದ ಮೇಲೇ
ನಟನೆಯ ಮಾಡೂ   ಎನ್ನ ಮನದ ಮಂದಿರದಲ್ಲೀ
ಶ್ರೀ ಶ್ರೀನಿವಾಸಾ   ಶ್ರೀ ತಿರುಮಲವಾಸಾ   ||ಪ||

ತಕ್ಕಿಟ ತಕ್ಕಿಟ ತದ್ಧಿಮಿ ತೋಂ ಎಂದು
ಹಿಂದು ಮುಂದಕೆ ಒಲಿಯುತ ನಲಿಯುತ
ಹಸ್ತ ಮುದ್ರೆಗಳ ನಾನಾ ಅಭಿನಯದಿಂದಲಿ
ಭರತನ ಶಾಸ್ತ್ರದ ಶುದ್ಧ  ಸಂಪ್ರದಾಯದಿ   ||೧||

ಕುಡಿಗಣ್ಣೋಟ ಕಿಡಿಮಿಂಚೋಟ
ಪದಗಳ ಚಲನೆಯ ಸುಂದರ ಮಾಟ
ಹೃದಯದಾಳದಿ ಆಡೆಲೊ ಆಟ
ಸದಯ ರುಕ್ಮಿಣೀ ವರದ ನೀನಾಟ್ಯ   ||೨||

## ಪಾವನ ಮೂರುತಿ

ಪರಮಪಾವನ ಘನ ಮೂರುತಿ   ಶ್ರೀ ಶ್ರೀನಿವಾಸಾ
ಹರಿನಾರಾಯಣ ಪಾವನ ಕೀರುತೀ

ದಾಸಾಹೃದಯವಾಸಾ ಶ್ರೀ ಶ್ರೀನಿವಾಸಾ
ಶೇಷಾಶಯನ ಶ್ರೀಶಾ
ಪೋಷಿಪ ಭಕ್ತರ ಅನುದಿನತಾನು
ಘೋಷಿಸಿ ಧರ್ಮವ ಕರುಣಾ ನಿಧಿಯು ||೧||

ಕರುಣಾಕರನು ಸ್ವಾಮಿ ಶ್ರೀ ಶ್ರೀನಿವಾಸಾ
ಶರಣಾರ್ತ ರಕ್ಷಕನೂ
ಕರಿಯು ಕಾಯಲು ಓಡಲಿಲ್ಲವೇ ಅಂದೂ
ತರಳೆ ದ್ರೌಪದಿಗೆ ಅಕ್ಷಯ ನೀಡಲಿಲ್ಲವೇ ||೨||

ವೇದಗಳಿಂದ ಸ್ತುತ್ಯಾ ಶ್ರೀ ಶ್ರೀನಿವಾಸ
ನಾದಲೋಲನು ಪ್ರೀತಾ
ಸಾಧಿಸಿ ಸಮಯವ ಸಲಹುವನವನೂ
ಭೇದ ವಿದೂರನು ರುಕ್ಮಿಣಿ ವರದನೂ ||೩||

## ಬಿರುದು

ಕರುಣಾಕರನೆಂಬ ಬಿರುದು ನಿನಗಿಹುದಾ
ಧರಣಿ ಪತಿಯು ಬಲ್ಲೆನಾ ವೆಂಕಟ ವರದಾ
ಘೋರದುರಿತ ಪಾರಾವಾರದಿಂದೆನ್ನ
ಪಾರುಗಾಣಿಸದೆ ಏಕೆ ನಿಂದಿಹೆಯೋ ||೧||

ಮೌನದಿನಿಂದಹೆ ಶ್ರೀ ಗಿರಿ ಮೇಲೇ
ಮೌನಿಗಳೊಡೆಯನೇ ಏಕಾಂತದಲಿ
ಆದರೆ ಬಿಡುವರೇ ಭಕ್ತರು ನಿನ್ನನು
ಪಾದಪದ್ಮವನರಸಿ ಬಾರದಿರುವರೇ ||೨||

ನಿನ್ನಿಂದ ಬಂದಿಹ ನಿನ್ನಲ್ಲೇ ಲಯಿಸುವ
ನಿನ್ನದೇ ಆಗಿರುವ ಸುಂದರ ಜಗವೆಲ್ಲಾ
ನಿನ್ನನೇ ನಂಬಿಬಂದು ನಿನ್ನನಾಶ್ರಯಿಸಿ
ನಿನ್ನನು ಕಾಣಲು ನಿಂತಿಹೆ ರುಕ್ಮಿಣಿ ವರದಾ ||೩||

## ನಿನ್ನ ರೂಪಾ

ಕಾಣಲಾಶಿಪೆ ನಿನ್ನ ರೂಪಾ ಶ್ರೀನಿವಾಸಾ ||ಪ||

ಉಭಯಸೇನೆ ಮಧ್ಯೆ ಮಣಿಮಯ ರಥದಲ್ಲಿ
ಉಭಯ ಹಸ್ತಗಳಲ್ಲಿ ಪಿಡಿದು ಸೂತ್ರವನೂ
ತೇಜಿಯ ನಡೆಸುತ್ತ ಯುದ್ಧ ವರ್ಣಿಸುತ್ತ
ರಾಜನೆ, ಪಾರ್ಥನಿಗೆ ಗೀತೆಯನು ಬೋಧಿಸಿದ
ಹೇ ಪಾರ್ಥಸಾರಥಿ ಎನ್ನ ಹೃತ್ಪದ್ಮ ಮೂರುತೀ ||೧||

ಉಟ್ಟಿದ್ದ ಪಟ್ಟೆ ಪೀತಾಂಬರ ಜಾರುತಲಿರೆ
ಸಿಟ್ಟಿಗೆದ್ದು ನೀ ತಾತ ಭೀಷ್ಮನ ಬಳಿಗೋಡಿ
ಶರಶಯ್ಯೆಯಲ್ಲಿ ಮಲಗಿದ ತಾತನಿಗೊಲಿದು
ಸ್ಮರನಯ್ಯ ತೋರಿದ ನಿನ್ನ ವಿಶ್ವರೂಪವನಾ
ಹೇ ಪಾರ್ಥಸಾರಥಿ ಎನ್ನ ಹೃತ್ಪದ್ಮ ಮೂರುತೀ ||೨||

ಗಗನರಾಜನ ಮಗಳ ಕೈಯನ್ನ ಪಿಡಿದು
ಗಗನೋನ್ನತ ಶ್ರೀಗಿರಿಯ ಮೇಲೆ ನೀ ನಿಂದು
ಪರಿಪರಿ ವಿಧದಲಿ ಪೂಜೆಯಗೊಳುತಲಿ
ವರದ ರುಕ್ಮಿಣಿಯಾ ಸತತ ಕಾಯುತಲಿರುವ
ಹೇ ಶ್ರೀನಿವಾಸಾ ಎನ್ನ ಮಾನಸಾಧಿಪಶ್ರೀಶಾ ||೩||

## ಮಾನಸಮಂದಾರಾ

ಮಾನಸಮಂದಾರಾ   ಇಂದೀವರಾ ಸುಂದರಾ
ಪದ್ಮಿನೀಪ್ರಿಯಕರಾ   ಗೋವರ್ಧನೋದ್ಧಾರ ||೧||

ತುಲಸೀಮಾಲಾಧರಾ   ವರವೇಣುಲೋಲಾ
ಜಲಜನಯನ ಹರಿ   ವರದ ಶ್ರೀ ಗೋಪಾಲಾ ||೨||

ನಾರದ ಸನ್ನುತ   ದೇವೇಂದ್ರ ಪೂಜಿತ
ವಾರಿಧಿಶಯನಾ   ಭಕ್ತಾರಾಧಿತ ||೩||

ಸಪ್ತ ಶೈಲದೊಡೆಯಾ   ನಿತ್ಯತೃಪ್ತ ಸ್ವಾಮಿ
ತಪ್ತ ದುಃಖಹರಾ   ನಿತ್ಯ ಪರಿಪೂರ್ಣ ||೪||

ಶರಣವರೇಣ್ಯಾ   ಘನನೀಲವರ್ಣ
ವರದವೇಂಕಟ   ರುಕ್ಮಿಣಿ ಪ್ರಾಣಾ ||೫||

## ಶ್ಲೋಕ

ಇಂದುವದನಾ   ಕುಂದರದನಾ
ಬಂಧುರನಯನಾ   ಶ್ರೀರಮಣಾ
ಮಂದರೋದ್ಧರಣಾ   ನಂದಾನಂದನಾ
ಸುಂದರ ಸ್ವರೂಪಾ   ನಿತ್ಯಪರಿಪೂರ್ಣಾ ||೧||

ಶ್ರೀಗಿರಿವಾಸಾ ಭಕ್ತಜನಪೋಷಾ
ನಿಗಮಾಗಮಸನ್ನುತ ಖಗವಾಹನನೇ
ಸುಗುಣ ಗಂಭೀರಾ ಸಾಗರಶಯನಾ
ಜಗನಸಲಹುವಾ ರುಕ್ಮಿಣಿವರದನೇ ||೨||

## ಗೋಪೀಲೋಚನ

ಗೋಪೀಲೋಚನಾ ಚಾತಕಾಂಬುಜಾ
ಗೋಪತನಯಾ ಗೋಪಗೋಪೀಶ್ವರಾ ||ಪ||

ಆಕಾಶರಾಜವರದಾ ಕೇಶವಾ
ವೇಂಕಟನಾಥಾ ವೇದಪ್ರತಿಪಾದ್ಯ
ಸಚ್ಚಿದಾನಂದಾ ಸನ್ಮಂಗಳ ರೂಪಾ
ಅಚ್ಯುತ, ಮುರರಿಪು, ಶೇಷಾದ್ರಿವಾಸಾ ||೧||

ತುಲಸೀಮಾಲಾ ರಾಜಿತ ಮೂರ್ತಯೇ
ಬಲದೇವಾನುಜ ಕಲಿಮಲನಾಶಕಾ
ಆದಿದೇವನೇ ದಾಮೋದರನೇ
ಮಾಧವಪಾಲಯ ರುಕ್ಮಿಣಿ ವರದಾ ||೨||

## ಶ್ಲೋಕ

ರುಕ್ಮಿಣೀ ಹೃತ್ಕಮಲಾರ್ಚಿತ ಪಾದಪಂಕಜಯುಗುಮಾ
ಭಕ್ತಮಾನಸವಾಸ, ಶ್ರೀಶ, ಯದುಕುಲಾಂಬುಧಿಸೋಮಾ

ಶಂಖ ಚಕ್ರ ಗದಾಲಸತ್ಪಾಣಿ ಶರಣಾಗತರಕ್ಷಕ
ಕಿಂಕರಾ ವರದ ಭಗವನ್ ಅತಿಕಲ್ಯಾಣದಾಯಕಾ ||೧||

ಕೃಷ್ಣ, ಶ್ರೀ ಪಾರ್ಥಸೂತ ಶ್ರೀ ತುಲಸೀವನ ಸಂಶ್ರಿತಃ
ವೃಷ್ಣಿ ವಂಶ ಪ್ರದೀಪ ಕೃತಭೀರತ ಯುದ್ಧಾರ್ಥಸೂತ
ಅಷ್ಟಾದಶ ಮಂತ್ರೇಣ ತೋಷಿತ ಶ್ರೀವಾಸುದೇವ
ಶಿಷ್ಟಜನ ಸಂರಕ್ಷಣ ಬೃಂದಾವನ ಸಂಚಾರೀ ||೨||

ನೀಲಮೇಘಶ್ಯಾಮತನು ಪದ್ಮ ಪುಷ್ಪಾರ್ಚನ ಪ್ರಿಯ
ಕಾಲನಾಮಕ ಸ್ವಾಮಿ ಖಡ್ಗಧಾರಿ ಮೃಗಯಾಸಕ್ತಃ
ಕನ್ಯಾಶ್ರವಣ ತಾರೇಜ್ಯಃ ಪೀತಾಂಬರಧರೋ ನಘಃ
ಅನ್ಯಥಾ ಶರಣಂನಾಸ್ತಿ ತ್ವಮೇವ ಶರಣಂ ರುಕ್ಮಿಣೀವರದಾ ||೩||

## ನಂಬಿ ಬಂದೆನೋ

ನಂಬಿ ಬಂದೆನೋ ಕಾಯೋ ಎನ್ನನೂ
ಬೆಂಬಿಡದಲೆ ಶ್ರೀಪದ್ಮಿನೀ ರಮಣಾ ||ಪ||

ಭವಸಾಗರದಲ್ಲಿ ಬಲುನೊಂದೆನಯ್ಯ
ದಿವಿಜರೊಡೆಯನಾ ದಾರಿಯ ಕಾಣದೇ
ಆಸೆ ಆಮಿಷ ಕೋಪ ದ್ವೇಷದ ಸುಳಿಯಲ್ಲಿ
ಈಸಲಾರೆನೊ ನಾ ಘಾಸಿಯ ಪಡಲಾರೆ ||೧||

ಶೈಲವಾಸನೇ ಶ್ರೀನಿವಾಸಃ ಶ್ರೀಪತಿ
ಕಾಲ ನಿರ್ಮಾಪಕ ಕಾಲವ ಬಲಿಯಿಂ

ಶ್ರೀಶನೇ ರಕ್ಷಿಸು ರುಕ್ಮಿಣಿವರದಾ
ವಾಸುದೇವಹರಿ ಶರಣಾದೆ ನಿನಗೇ ॥೨॥

## ಗಜರಾಜವರದನೇ

ಗಜರಾಜವರದನೇ ನಿಜಗುಣ ಪರಿಪೂರ್ಣ
ಅಜರಾಮರವಂದಿತ ಸೇವಿತಚರಣಾ
ತ್ರಿಜಗವಂದಿತ ಶ್ರೀಶ ಶೇಷಾದ್ರಿವಾಸಾ
ಭಜಿಸುವೆನನುದಿನ ಪಾಲಿಸೋಎನ್ನಾ ॥೧॥

ದಾರಿಕಾಣೆನೊ ನಾನು ಭವಜಲಧಿ ಅತಿಘೋರ
ಬಾರಿ ಬಾರಿಗು ನೊಂದೆ ಮೋಹದ ಸುಳಿಯಲ್ಲಿ
ಯಾರು ಕಾಯುವರಿಲ್ಲ ಧೀರಗಂಭೀರನೇ
ಪಾರುಗಾಣಿಸು ಬಾರೊ ಪದ್ಮಿನೀ ರಮಣನೇ ॥೨॥

ವೇಂಕಟ ಕೃಷ್ಣನೆ ಶ್ರೀಚರಣವನು ಪಿಡಿದಿಹೆ
ಸಂಕಟದಿಂದೆನ್ನ ಸಲಹಯ್ಯ ಮಾಧವನೆ
ಕಿಂಕರರಿಗೆಲ್ಲ ಅಭಯದಾಯಕನಯ್ಯ
ಪಂಕಜನಯನನೇ ಸಲಹೊ ರುಕ್ಮಿಣಿ ವರದಾ ॥೩॥

## ನಿನ್ನ ದರುಶನಕೆ ಬಂದೆ

ನಿನ್ನ ದರುಶನಕೆಂದು ಬಂದೆನೋ ಹರೀ
ಘನ್ನ ಮಹಿಮಾ ಶ್ರೀಶ ಕರುಣಿಸೋ ಧೊರೀ ॥ಪ॥

ಘನನೀಲೋನ್ನತ ಕಾಯ ಪದುಮಾಕ್ಷ
ಇನಕುಲಾಂಬುಧಿ ಸೋಮಾ ವಿಶ್ವರಕ್ಷ
ವರತುಲಸೀಮಾಲಾ ಶೋಭಿತ ವಕ್ಷ
ಪರಮಾದರದಿ ಕಾಯೊ ಸಹಸ್ರಾಕ್ಷ ॥೧॥

ಪೀತವಸನ ಧಾರೀ ಅರಿಸಂಹಾರೀ
ಪ್ರೀತಭಕ್ತಜನ ಹೃದಯ ವಿಹಾರೀ
ಕರಕಂಕಣ ಕಟಿಮೇಖಲ ಧಾರೀ
ಪರಮಪುರುಷ ಭಕ್ತ ಮಾನಸ ಹಾರೀ ॥೨॥

ಕಾಮಿತವರದಾ ಕರುಣಾವಾರಿಧಿ
ಸ್ವಾಮಿವೇಂಕಟಾ ಪದ್ಮಿನಿ ಪ್ರಾಣನಾಥಾ
ಸೋಮಶೇಖರ ಪೂಜಿತ ಮುರಹರಿ
ಭೀಮಪರಾಕ್ರಮ ರುಕ್ಮಿಣಿ ವರದಾ ॥೩॥

## ದಯಮಾಡೋ

ದಯಾಮಾಡೋ ಹರಿ ಎನ್ನಂತರಂಗದಲ್ಲಿ
ಭವದ ಭಯವ ತೊಲಗಿಸೋ ಶೌರಿ ॥೧॥

ಶ್ಯಾಮಲ ಕಾಯಾ ಶ್ರೀಮಲೆರಾಯಾ
ಸೋಮಕುಲೋದ್ಭವಾ ಪದ್ಮಿನಿವರನೇ ॥೨॥

ಸುಗುಣ ಗಂಭೀರಾ ನಾನಾವತಾರಾ
ಖಗವಾಹನ ಪ್ರಭೋ ಮೋಹನಾಕಾರಾ ॥೩॥

ಮೆಲುಮೆಲನೆ ಬಾರೋ ಹೃದಯವನೆ ಸೇರೋ
ಚೆಲುವ ಶ್ರೀನಿವಾಸ ರುಕ್ಮಿಣಿ ವರದನೇ ||೪||

## ಮೂಕಮಕ್ಕಳು

ಹೆಜ್ಜೆ ಹೆಜ್ಜೆಯನಿಟ್ಟು ಹತ್ತಲಾರದೆ ಹತ್ತಿ
ಅಜ್ಜರು ಬರುತಿಹ ಬಗೆಯನ್ನು ನೋಡಿ ||ಪ||
ಅಜ್ಜನ ಪಿತ ನಿನಗೆ ದಯೆಯು ಬಾರದೇ
ಸಜ್ಜಾಗಿ ನಿಂದಿಹೆಯಲ್ಲೋ ಶ್ರೀಗಿರಿ ಮೇಲೆ ||ಅ|| ಪ||
ಶ್ರೀಶಾ ಗೋವಿಂದಾ, ಶ್ರೀನಿವಾಸ ಗೋವಿಂದಾ, ಗೋವಿಂದಾ
ಹರಿ ಗೋವಿಂದಾ

ಏತಕೆ ಬರುವರು ಈ ಪರಿ ನಿನ್ನ ಬಳಿ
ತಾತನೆ ಎನಿಹುದೋ ನಿನ್ನ ನೋಟದಲಿ
ಮಾತುಮಾತಿಗೆ ಗೋವಿಂದಾ ಹರಿ ಎನ್ನುತಲಿ
ಸೋತು ಬಳಲಿ ಬಂದು ಕೂಡುವರಿಲ್ಲಿ ||೧||
ಶ್ರೀಶಾ ಗೋವಿಂದಾ, ಶ್ರೀನಿವಾಸ ಗೋವಿಂದಾ, ಗೋವಿಂದಾ
ಹರಿ ಗೋವಿಂದಾ

ಒಮ್ಮೆಗೆ ನಿನ್ನಯ ದರ್ಶನವಾಗದು
ಬಿಮ್ಮನೆ ಬೀಗಿ ನೀ ನಿಂದಿರುವೇ
ನಿನ್ನಯ ಪರಿವಾರದ ಕರುಣೆಯು
ನಿನ್ನ ಕರುಣೆಗಿಂತ ಮಿಗಿಲಲ್ಲವೆ ? ||೨||
ಶ್ರೀಶಾ ಗೋವಿಂದಾ, ಶ್ರೀನಿವಾಸ ಗೋವಿಂದಾ, ಗೋವಿಂದಾ
ಹರಿ ಗೋವಿಂದಾ

ಸಾಕು ಬಾರೋ ಎದ್ದು ನೂಕಬೇಡವೋ
ಮೂಕಮಕ್ಕಳು ಇವರೂ ನಿನ್ನವರೂ
ಹರಿಸೆಲೊ ನಿನ್ನಯ ಕಾರುಣ್ಯ ಧಾರೆಯ
ವರದ ರುಕ್ಮಿಣಿ ಶ್ರೀಶ ಹರಿಸೆಲೊ ಬೇಗೆಯ ||೪||
ಶ್ರೀಶಾ ಗೋವಿಂದಾ, ಶ್ರೀನಿವಾಸ ಗೋವಿಂದಾ, ಗೋವಿಂದಾ
ಹರಿ ಗೋವಿಂದಾ

## ಯಶೋದಾಕಂದ

ನಂದಗೋಪ ಶ್ರೀ ಯಶೋದೆಯ ಕಂದಾ
ನಿಂದಾ ಈ ಗಿರಿಯಲ್ಲಿ ಆನಂದದಿಂದಾ ||ಪ||

ಕಂದರ್ಪನಯ್ಯ ಮುಕುಂದನು ನಿಂದಾ
ಇಂದು ಭಕ್ತರಾ ಮೊರೆ ಕೇಳಿ ಗೋವಿಂದಾ ||ಅ|| ಪ||

ಗೋವಿಂದ ಗೋವಿಂದ ಗೋವಿಂದ ಶಬ್ದವು
ಆನಂದದಿಂದ ಪ್ರತಿಧ್ವನಿಸುತಿವೆ ಇಲ್ಲಿ
ತಿರುಪತಿ ತಿಮ್ಮಪ್ಪಾ ನಮ್ಮ ನೀ ಕಾಯಪ್ಪ
ಮೊರೆ ಕೇಳಿ ಬರುತಿದೆ ಎಲ್ಲೆಡೆಯಲ್ಲಿ ||೧||

ಪುಷ್ಪಪತ್ರ ಫಲ ತೋಯ ಕಾಣಿಕೆಯು
ಬಾಷ್ಪಭಕ್ತಿಯು, ಹಣದ ಝಣತ್ಕಾರ
ಎಲ್ಲೆಲ್ಲಿ ನೋಡಲು ಈ ಜನರವವು
ಫುಲ್ಲನಾಭ ಶ್ರೀ ರುಕ್ಮಿಣಿ ವರದನ ನಿಲಯವು ||೨||

## ವಚನ

ಆಜಾನುಬಾಹೂ ರಾಜೀವಲೋಚನನೇ
ಪೂಜಗದಿ ವಂದಿತನೆ ದಿವಿಜರೊಡೆಯ
ರಾಜ ಮಹರಾಜ ಗುರುರಾಜರಾ ರಾಜಾ
ರಾಜಿಸೈ ಎನ್ನ ಮನದಲ್ಲಿ ವೆಂಕಟೇಶಾ ||೧||

ಭವ್ಯ ಮೂರುತಿಯೆ ನೀ ದಿವ್ಯ ಸ್ವರೂಪಿಯೇ
ದೇವಾಧಿದೇವನೇ ಪದುಮಿನಿ ಪ್ರಾಣನಾಥಾ
ಪೀತಾಂಬರಧಾರೀ ಪತಿತ ಜನೋದ್ಧಾರೀ
ಹಸ್ತ ಶಂಖ ಚಕ್ರ ಗದಾ: ಲೀಲಾ ಕಮಲಧಾರೀ ||೨||

ಕರುಣಾಳು ಬಾ ಎನ್ನ ಹೃದಯಮಂದಿರ ಬೆಳಗು
ಪರಮಾತ್ಮ ಬಾಳೆಲ್ಲ ಸದಯ ನೀ ಬೆಳಗಯ್ಯಾ
ಗಿರಿಯವಾಸಾ ಪ್ರಭುವೇ ಚರಾಚರದಿ ಗೋಚರನೇ
ಮರೆಯುವೇ ಬಾರಯ್ಯ ರುಕುಮಿಣಿ ವರದಾ ||೩||

## ಅಭಿನಮಿಪೆ

ಚರಣಕಭಿನಮಿಪೆ ಚರಾಚರನಿವಾಸಾ
ಪರಿಪೂರ್ಣ ಪ್ರೇಮಮಯ ಪರಮಾತ್ಮ ಶ್ರೀಶಾ

ಅಂದು ಶಕಟನ ಒದ್ದ ಚರಣಕೇ
ಬಂದು ಬಲಿಯ ಮೆಟ್ಟಿದ ಚರಣಕೇ
ಒಂದೊಂದು ಹೆಜ್ಜೆಯಿಟ್ಟು ಗೋಕುಲದಲ್ಲಿ
ಚಂದದಿಂದ ನಡೆದ ಶ್ರೀ ಚರಣಕೇ ||೧||

ಸಾಗಿಪ್ರೋಗೆ ಲಕುಮಿ ಕೊಲ್ಲಾಪುರಕೆ
ಆಗ ಆವಾಸ ಅರಸುತ ಬಂದ ಚರಣಕೇ
ವಲ್ಮೀಕದಲ್ಲಿ ಮನೆಯು ಮಾಡಿದಂಥ ಚರಣಕೇ
ನಲ್ಮೆಯಿಂದಲಿ ಅಲ್ಲಿ ವಾಸ ಮಾಡಿದ ಚರಣಕೇ ||೨||

ಮೃಗಯಾವಿಹಾರದಿ ಮೃಗನಯನೆಯೊಡನೆ
ಜಗಳಾಡಿ ಬಹುಬಳಲಿ ತೇಜಿಯು ಮೃತಿ ಹೊಂದೆ
ಖಗವಾಹನನೇ ಒಲು ವ್ಯಾಕುಲದಿ ನಡೆ ತಂದು
ಮಿಗಿಲಾದ ದುಃಖದಿ ಬಕುಳೆ ಬಳಿಗೆ ಬಂದ ಚರಣಕೇ ||೩||

ತರುಣಿ ಪದ್ಮಿನಿಯೊಡನೆ ಸರಸದಿಂ ಒಡನಾಡಿ
ಕರುಣೆತೋರಿ ಭಕ್ತಜನರ ಸುಖ ಪಡಿಸಿ
ಆರಾರ ಕೋರಿಕೆಗಳನು ಈಡೇರಿಸುತ್ತಿರುವ
ತೋರಮುಹಿಮ ರುಕ್ಮಿಣಿ ವರದನ ಚರಣಕೇ ||೪||

## ನಡೆದು ಬಾ

ಪದವಿಡುತ ನಡೆದು ಬಾ ಎನ್ನ
ಹೃದಯ ಮಂದಿರದಲ್ಲಿ ಸದಯಾ
ಮುದದಲಿ ಸಜ್ಜಾಗಿ ನೀ ಬಾ
ಗೆಜ್ಜೆ ಕಾಲುಂಗರದ ಘಲ್ ಘಲ್ಲು ರವದಿಂದ
ಹೆಜ್ಜೆ ಹೆಜ್ಜೆಯನಿಡುತ ನಲಿನಲಿಂದ ನಡೆದು ಬಾ ||೧||

ಪಟ್ಟೆ ಪೀತಾಂಬರದ ಕಾಂತಿ ಚಿಮ್ಮುತಲಿರೆ
ಪಟ್ಟೆ ನಡುವಿನ ವಸ್ತ್ರ ವೈಯಾರದಿಂ ನಲಿಯುತಿರೆ ||೨||

ಉರದ ಗೆಜ್ಜೆ ಪದಕಹಾರ ಕರದ ಕಂಕಣ ಉಂಗುರ
ಶಿರದ ಮಣಿ ಮುಕುಟದಿಂದ ಪರಿಪರಿಯ ನವ ಶೋಭೆಯಿಂದ ||೩||

ಅಂತರಂಗದ ಮೂರ್ತಿ ಬಾ ಕಂತುಪಿತ ಶ್ರೀನಿವಾಸ ಬಾ
ಶಾಂತಮೂರ್ತಿ ಮಲಿಯ ವಾಸಾ ಸಂತೋಷದಿಂ ಬಾ ರುಕ್ಮಿಣೀಶಾ ||೪||

## ನಾಮ ಮಹಿಮೆ

ನಿನ್ನಯಾ ನಾಮ ಮಹಿಮೆ ಸನ್ನುತಾಂಗನೆ ನಾವರ್ಣಿಪೆನೆಂತು ||ಪ||

"ವಾಸುದೇವಾ" ಎಂಬ ನಾಲ್ಕಕ್ಷರವೇ
ಶಿಶುವನುದ್ಧರಿಸಿ ಸಲಹಿತು ನೋಡೈ
"ನರಸಿಂಹ"ನ ಪಾವನ ನಾಮ ಸಲಹಿತು
ತರಳ ಪ್ರಹಲ್ಲಾದನ ಕ್ರೂರ ದೈತ್ಯ ನಿಂ ||೧||

"ಅಧೋಕ್ಷಜಾ" ಎಂದು ಕೂಗಲು ಗಜವು
ಉದ್ಧರಿಸಿ ಅವನ ದುಷ್ಟನ ತರಿದು ಚಕ್ರದಿ
"ನಾರಾಯಣಾ" ಎನ್ನಲು ಧಾವಿಸಿ ಬಂದೆಯೋ
ಪರಮಪಾಪಿ ಅಜಮಿಳನ ಸಲಹಲು ||೨||

"ಕೃಷ್ಣಾ" ಕರುಣಾಘನಾ ಶರಣ್ಯೆಯಾ
ಕೃಷ್ಣೆಯ ಮಾನವ ಕಾಯಲಾರೆಯ
ತುಂಬಿದ ಸಭೆಯಲಿ ದ್ರೌಪದಿ ಕೂಗಲು
ಬೆಂಬಿಡದೆಲೆ ಬಂದು ಕಾಯ್ದೆ ಪಾಂಚಾಲಿಯ ||೩||

ಅಕ್ಷರಗಳ ಲೆಕ್ಕ ಬೇಡವು ಎನಗೆ
ರಕ್ಷಕನಾಗಿರು ಬೇಡುವೆ ನನಗೇ

ಶಕ್ತ್ಯಳು ನಾನಲ್ಲ ವಿಧ ವಿಧ ಪೂಜಿಸೆ
ರುಕ್ಮಿಣಿ ವರದನೆ ಪೊರೆಯ್ಯೆ ಬೇಡುವೆ ||೪||

## ದಯಮಾಡು

ದಯಮಾಡೂ ದಾನವಾಂತಕಾ ಹೃ
ದಯ ಮಧುರ ಪೀಠದಲಿ ಎನ್ನಯ

ಕರುಣಾಂಬುಧೇ ಬಾರೈಯ್ಯ ಶರಣ ಜನಪರಿಪಾಲನಾ
ತ್ವರಿತದಿ ಹೇ ಪ್ರಭುವೇ ಗರುಡಗಮನ ದುರಿತನಿವಾರಣಾ ||೧||

ಮಾಧವಾ, ಮುರುಳೀಧರಾ ಯಾದವ ಕುಲತಿಲಕಾ
ಮಧುಸೂಧನ ಶ್ರೀ ಕೃಷ್ಣಾ ಉದಧಿಸುತೆಯವರ ಕರಪಿಡಿದವ ||೨||

ಸ್ವಚ್ಛವಾದೀ ಪೀಠದಿ ಉತ್ತುಮ ನೀ ಕೂಡಲೋ
ಸಚ್ಚಿದಾನಂದ ಶ್ರೀವಾಸಾ ಮತ್ತೆ ಬೇಡುವೆ ನಿನ್ನ ರುಕ್ಮಿಣಿ ವರದನೇ ||೩||

## ಪೂಜೆ

ಈ ಶುಭ್ರ ಸ್ಥಳದಲ್ಲಿ ಈ ಶುಭ್ರ ಪೀಠದಲಿ
ವಾಸುದೇವನೆ ನಿನ್ನ ನೋಡಿ ತನ್ಮಯಳಾದೆ ||೫||

ಅರಿಶಿನವು ಕುಂಕುಮ ಪುಷ್ಪ ಮಂತ್ರಾಕ್ಷತೆ
ಪರಿಪರಿಯ ಸ್ತೋತ್ರವನು ಮಾಡುತಲಿ ಈ ಜೀವ
ಕರುಣಾಳು ಮಾಯೆಯಿಂ ಮುಕ್ತ ನೀ ಮಾಡೆಂದು
ಶರಣಾಗಿ ಬೇಡುವುದು ಹಲವು ಕೀರ್ತನೆಯಿಂದ ||೧||

ಭಾವನೆಯ ಮಂದಾರ ಮಾಲೆಯನು ತೊಡಿಸುತ್ತ
ದೇವದೇವರ ದೇವ ಪ್ರೇಮ ತಿಲಕವನಿಟ್ಟು
ಕರ್ಮ ಕೊಳಲನು ಕೈಗೆ ಕೊಟ್ಟು ಮರ್ಮವನರಿತು
ಸುಮ್ಮಾನ ಭಕ್ತಿಯಿಂ ಅಡಿಗಳಿಗೆ ಪೊಡಮಟ್ಟು ||೨||

ಶ್ವಾಸಧೂಪವ ಹಾಕಿ ಪ್ರಾಣದಾರತಿ ಬೆಳಗಿ
ಹಸನಾದ ಬಗೆಬಗೆಯ ತನಿವಣ್ಣು ನಿನಗೂಡಿ
ಬೆಸಗೊಂಡು ಬಹುವಿಧದಿ ಉಣ್ಣು ನೀನೆನ್ನುತಲಿ
ಜನವು ನಿನಗಕ್ಕೆ ಎನಲು ರುಕ್ಮಿಣಿವರದ ||೩||

## ಜಯಗೋವಿಂದ

ಜಯಗೋವಿಂದ ಜಯಗೋವಿಂದ ಜಯಗೋವಿಂದ ಜಯಗೋವಿಂದಾ ||ಪ||

ನಂದ ನಂದನಾ ಇಂದಿರೆ ರಮಣಾ ಬಂಧು ಜನೋದ್ಧಾರ
ಮಂದರಗಿರಿಧರಾ ||ಅ||ಪ||

ಅಂದು ಭುವಿಯಲಿ ದಾನವರೆಡೆಯಲಿ
ಕುಂದರದನೆವೇದ ಕನ್ಯೆಯು ಅಬ್ಧಿಲಿ
ನೊಂದು ಬಳಲುತಾ ಕರೆಯಲು ನಿನ್ನನು
ಛಂದದಿಂದ ಮೀನನಾಗಿ ಉದ್ಧರಿಸಿದೆ ||೧||

ಕೂರ್ಮನೀನಾಗಿ ಮಂದರಗಿರಿಯ
ಮರ್ಮದಿಂ ಪೊತ್ತು ಸದಯುರಿಗಭಯ
ವರಾಹ ಮೂರ್ತಿಯೆ ದಾಡೆಲಿ ಧರಣಿಯ
ನರಸಿಂಹ ಉದ್ಧರಿಸಿದೆ ಬಾಲಕನಜೀಯಾ ||೨||

ಪಲ್ಲವ ಪಾದಗಳಿಂದಲಿ ಬಲಿಯ
ಫಾಲವ ತುಳಿದು ದೇವತೆಗಳಿಗಭಯ
ಜನಕನ ಆಜ್ಞೆಯ ಶಿರದಲ್ಲಿ ಧರಿಸಿ
ಜನುವಾಗಿ ತಾಯ್ ಶಿರ ತರಿದ ಭಾರ್ಗವನೇ ||೩||

ಸುಂದರ ಮೂರ್ತಿಯೆ ಕೋದಂಡರಾಮನೆ
ಅಂದು ಪಿತೃವಾಕ್ಯ ಮಾಡಲುಪಾಲನೆ
ಇಂದೀವ ರಾಕ್ಷಿಯ ಸೌಮಿತ್ರಿಯೊಡನೆ
ದಂಡನೆ ಗೈದೆಯೊ ಅಸುರರ ದೇವನೆ ||೪||

ನಂದ ಯಶೋದಾ ಕಂದಮನೋಹರ
ಸುಂದರ ಗೋಪಿಯರೊಡನೆ ವಿಹಾರಾ
ಚಂದದಿಂದ ಭಕ್ತಜನರ ಉದ್ಧಾರಾ
ಇಂದೀವರಾಕ್ಷನೆ ಪೇಳಿದ ಗೀತಾಸಾರಾ ||೫||

ಅನುವಾಗಿ ದಾನವ ರಮಣಿಯ ಮಾನವ
ಘನವಾಗಿ ಬೌದ್ಧನೆ ಹರಣವ ಗೈದವ
ತೇಜಿಯ ನೇರುತ್ತ ಭಕ್ತರ ಹೃದಯವ
ಮೋಜಿನ ಕಲ್ಕಿಯೆ ಸೂರೆಗೊಳ್ಳುವ ಮಾಧವ ||೬||

ಹತ್ತಾವತಾರದಿ ದುಷ್ಟದಮನವ
ಮತ್ತೆ ನೀ ಮಾಡುತ್ತ ಶಿಷ್ಟಪಾಲನವ
ಕಾರುಣ್ಯ ಮೂರ್ತಿಯೆ ರುಕ್ಮಿಣಿ ವರದಾ
ಶರಣಾಗತ ಪರಿಪಾಲನೆ ನಮೊ ನಮೊ ||೭||

## ನಿನ್ನ ನಿರ್ಮಲ ಪ್ರಭೆ

ಚಿತ್ತದಲಿ ಮೂಡಲ್ಕೈ ನಿನ್ನ ನಿರ್ಮಲ ಪ್ರಭೆಯು ||ಪ||
ಚಿತ್ತಾಜ ಜನಕನೇ ಮುದ್ದು ಮೋಹನ ಪ್ರಭೆಯು ||ಅ||ಪ||

ಚಿತ್ತದಾಗಸದಲ್ಲಿ ಮೂಡಲಲಿ ಮೂಡಿ ಬರೆ
ಬಿತ್ತರಿಸೆ ಎಲ್ಲೆಡೆಯು ಉತ್ತಮದ ಉಷೆಕಿರಣ
ಪಡುವ ಹೃದಯದ ಮಲರೆ ಭ್ರಮರಝೇಂಕೃತಿಗೈಯೆ
ಮೃದು ಮಧುರ ತಂಬೆಲರ ಗಮನ ಸೌರಭ ಒಯ್ಯೆ ||೧||

ಗಾತ್ರಮಂಟಪದಲ್ಲಿ ಹೃದಯಸಿಂಹಾಸನದಿ
ಸ್ತೋತ್ರಗೈಯುತ ನಿನ್ನ ಪದುಮಪೀಠದಲಿ
ಪುಳಕಜಲ ಅಭಿಷೇಕ ಸದಯಗೈಯುತೆ ಜೀವ
ನಳಿನಾಕ್ಷ ಅರ್ಚಿಪುದು ನಯನ ಪುಷ್ಪವ ಬಾರಾ ||೨||

ನೇತ್ರ ದೀಪವನುರಿಸಿ ಶ್ವಾಸಧೂಪವ ಹಾಕಿ
ಹಸ್ತ ಚಾಮರ ಬೀಸಿ ನಸುನಗೆಯ ಫಲವಾ
ಗುರುಕರುಣದ ಮೃತವ ಪರಮಪ್ರಭುವೇ ಊಡಿ
ಕರುಣೆದೋರ್ಕೈ ಶ್ರೀಶ ಭಜಿಸೆ ರುಕ್ಮಿಣಿ ವರದಾ ||೩||

## ಬಾಲಗೋಪಾಲ

ಬಾಲಗೋಪಾಲಾ ಶ್ರೀ ಭೂಮಿ ನಾಯಕಾ
ಶೈಲವಾಸಾ ದಯಾದಿ ಗುಣಾಮೃತಾಬ್ಧೇ

ದೇವಾಧಿದೇವಾ ಜಗದೇಕಶರಣ್ಯಾ
ಸೇವಕಜನ ಪೋಷಾ ಶ್ರೀ ಶ್ರೀನಿವಾಸಾ
ಸ್ವಾಮಿ ಪುಷ್ಕರಿಣೀ ತಟವಾಸ ಶ್ರೀಪತೇ
ಭಾಮಿನಿಮಣಿ ಪದ್ಮಿನಿ ಪಾಣಿ ಗೃಹೀತೇ ||೧||

ಕಮಲಾಲಯಪತೇ ಉದಾರಮತೇ
ಕಮನೀಯದಿವ್ಯ ಸುಂದರ ಮಂಗಳ ಮೂರ್ತೇ
ರಜನೀಕರ ಚಾರು ವದನಾರ ವಿಂದ ಶೋಭಿತೇ
ಗಜರಾಜ ವರದಾ ಶ್ರೀಶ ರುಕ್ಮಿಣೀ ಹೃದಯ ರಮತೇ ||೨||

## ಮತ್ಸ್ಯಾವತಾರ

ಶೇಷಾಗಿರೀಶಾ ರುಕ್ಮಿಣಿ ವರದಾ ||ಪ||
ವಾಸುಕಿಶಯನಾ ಭಕ್ತರ ಪೊರೆದಾ ||ಅ||ಪ||

ಅಂದು ದುರುಳ ರಕ್ಕಸ ವೇದಗಳನ್ನು
ಕುಂದಿಲ್ಲದೆ ತಂದೂ ಜಲಧಿಯೊಳಡಗಿಸೇ
ಪಾಹಿ ಪಾಹಿ ಪಾಹಿ ಶ್ರೀಮನ್ನಾರಾಯಣಾ
ತ್ರಾಹಿ ತ್ರಾಹಿ ಎಂದು ಮೊರೆಯಿಡೆ ಮುನಿಜನಾ ||೧|

ಶಂಖು ಚಕ್ರಾದಿ ಶೋಭಿತ ಚತುರ್ಭುಜ
ಸಂಕಟ ಹರಿಸುತ್ತ ನಾಲ್ಕು ವೇದಗಳನ್ನು
ಮೀನರೂಪವ ಧಾರಣೆ ಮಾಡಿ ನೀ ತಂದೇ
ದೀನಜನವನಾ ಶ್ರೀ ಗಿರಿಯಲ್ಲಿ ನಿಂದೇ
ನಮೋ ನಿನ್ನ ಮತ್ಸ್ಯಾವತಾರಕೆ ರುಕ್ಮಿಣಿ ವರದಾ

## ಮಂದರಗಿರಿಧರ

ಮನಸೋತೆ ನಾ ನಿನಗೇ ಶ್ರೀನಿವಾಸಾ
ಇನುಕುಲ ತಿಲಕನೇ ಶೇಷಾದ್ರಿವಾಸಾ ||ಪ||

ಮಂದರ ಗಿರಿಯಾ ಮಂಥನ ಮಾಡೀ
ಇಂದುಧರ ಭೂಷಣನಾ ರಜ್ಜನ್ನು ಪಿಡಿದೂ
ಚೆಂದದಿಂದ ಹಾಲ್ಗಡಲನ್ನು ದೇವದಾನವರೂ
ಇಂದಿರೆಯುರಸನೇ ಕಡೆಯುದೆ ನಿಂದಿರೇ ||೧||

ಗಿರಿಯುಬೆನ್ನಲಿ ಪೊತ್ತೇ ಕೂರ್ಮನೀನಾದೇ
ಸುರಗಣಕ್ಕೆ ಅಮೃತವನುಣಿಸಿದೇ
ಸರಿಯಾರು ನಿನಗೆ ಪೇಳೊ ರುಕ್ಮಿಣೀ ವರದಾ
ಪರಮಾತ್ಮತಾ ಭಕ್ತರ ಪೊರೆವುದು ಛಂದಾ ||೨||
ವಂದನೆಯು ನಿನಗೆ ಮಂದರ ಗಿರಿಧರ ಕೂರ್ಮನಿಗೇ

## ವರಾಹ

ತುಂಗಗಿರಿನಿವಾಸಾ ಶ್ರೀ ವೇಂಕಟೇಶಾ
ಮಂಗಳ ರೂಪಾ ಸಂಗೀತ ಲೋಲಾ ||ಪ||

ದುರುಳ ಹಿರಣ್ಯಾಕ್ಷ ಧರಣಿಯನು ಸುತ್ತೀ
ಭರದಿಂದಲಡಗಿಸೀ ಮೆರೆಯುತಲಿರಲೂ
ಕರುಣಾಳು ಧರಣೀ ದೇವಿಯು ಮೊರೆಯಿಡೆ
ಪೊರೆಹೆಯೋ ವರಹಾ ನಿನ್ನ ಕೋರೆದಾಡೆಯಿಂದ ||೧||

ತರಿದೆಯೋ ರಕ್ಕಸನ ಪೊರೆದೆಯೋ ಭಕ್ತರಾ
ದುರಿತ ವಿದೂರಾ ಕರುಣಾ ಸಾಗರಾ
ಮೊರೆಹೊಕ್ಕೆ ನಿನಗೇ ರುಕ್ಮಿಣಿ ವರದಾ
ವರಾಹ ರೂಪಿಶ್ರೀಶಾ ದಯತೋರಾಬಾರದೇ ||೨||

ಗೋವಿಂದಾ ನಮೋ ನಿನ್ನ ವರಹಾ ರೂಪಕ್ಕೆ

## ನರಸಿಂಹ

ಘೋರ ರೂಪವ ಧರಿಸಿ ಕಂಭದಿಂದೊಡೆದು
ನಾರಸಿಂಹನೆದುರಳ ದೈತ್ಯನ ತೊಡೆದು
ಕಂದ ಪ್ರಹಲ್ಲಾದನ ಮೊರೆಯ ನಾಲಿಸಿ ಬಂದು
ಸುಂದರಾಂಗನೆ ಶ್ರೀಶ ಧರ್ಮಸ್ಥಾಪನೆಗೆಂದು ||೧||

ಹರಿ ನಿನ್ನ ನಾಮವ ನುಡಿಯಲಾಗದೆಂದು
ಭರದಿಂದ ಪೀಡಿಸಿ ಕಾಡಿಸಿ ತರಳನ
ವಿಧ ವಿಧ ಕಷ್ಟಗಳ ಕೊಡುತಲಿ ದೈತ್ಯನು
ಪದುಮನಾಭನೆ ನಿನ್ನ ಕಂಭದಿ ತೋರನೆ ||೨||

ಪರಿಪರಿ ಅವತಾರ ತಾಳುತ್ತಲಿಹೆಯೋ
ಕರುಣಾಳು ಭಕ್ತರ ಪೊರೆಯುತ್ತಲಿಹೆಯೋ
ಗಿರಿಯಲ್ಲಿ ನೀನಿಂತು ಬೇಡಿದಿಷ್ಟಾರ್ಥವ
ಕರುಣಿಸು ತಿರುವೆಯೊ ರುಕ್ಮಿಣಿ ವರದಾ ||೩||

ನರಸಿಂಹನ ಮೋಹನ ರೂಪಿಗೆ ನಮೋ ನಮೋ

## ವಾಮನ

ಅಕ್ಕ ನೀನೋಡಮ್ಮಾ , ಈ ವಾಮನನಾ
ಚಿಕ್ಕವನಿವನೆಂದು ಬಗೆಯಬೇಡಮ್ಮಾ
ಸೊಕ್ಕಿದ ಮನುಜರಿಗೆ ತಕ್ಕ ಪಾಠವನಿವ
ಚಿಕ್ಕವನಾದರು ಕಲಿಸುವನಮ್ಮಾ ||೧||

ಹಿಂದೀತ ಬಲಿಯ ಯಾಗ ಶಾಲೆಗೆ ಪೋಗಿ
ಕುಂದಿಲ್ಲದೆಲೆ ಮೂರು ಹೆಜ್ಜೆಯ ಬೇಡಿ
ಸಂತಸದಿಂದವ ಧಾರೆಯೆರೆದುಕೊಡೆ
ಕಂತುಪಿತನಳೆದ ಮೂರುಲೋಕಗಳನ್ನು |೨||

ಸುಂದರ ಮೂರ್ತಿಯ ಕಣ್ತುಂಬ ನೋಡಮ್ಮ
ಕುಂದರದನನಿವ ಪದ್ಮನಿಯರಸನು
ಶೇಷಗಿರೀಶನೂ, ತ್ರೈಲೋಕ್ಯದೊಡೆಯನೂ
ಶ್ರೀಶ ಬಕುಳಾವತ್ಸ ರುಕ್ಮಿಣಿ ವರದನೂ || ೩ ||

ಹರೇ ವಾಮನ ರೂಪಿಯೆ ವಂದೇ

## ಭಾರ್ಗವ

ಘೋರ ದುರಿತದೂರಾ ತಾಯಾ ಶಿರವತರಿದಧೀರಾ
ಪೋರ ಪರಶುಧರ ಭಾರ್ಗವರಾಮ
ಕೋರುವ ಭಕ್ತರ ಪೊರೆವ ಶ್ರೀ ಧಾಮಾ

ಕ್ಷತ್ರಿಯ ಕುಲಬಲ ಮೂಲ ಕುಠಾರಾ
ಕ್ಷಾತ್ರ ತೇಜ ದರ್ಪ ಸಕಲಸಂಹಾರಾ

ಜಾಮದಗ್ನಿಭವ ಬಂಧನ ನಾಶಾ
ರಾಮ ನಿಸ್ಸೀಮಾ ಸಾಧುಜನ ಪೋಷಾ ||೧||

ಗಿರಿಯಲ್ಲಿ ನಿಂದಿಹನಿವಧೀರಾ
ಪರಮಾತ್ಮ ಶ್ರೀಶಾ ರಾಜಗಂಭೀರಾ
ವರ ಪದ್ಮಿನಿರಮಣ ರುಕ್ಮಿಣೀ ವರದಾ
ಪರಿಪರಿಯಿಂದಲಿ ಪಾಲಿಪ ಜನರಾ
ದುಷ್ಟ ಕ್ಷತ್ರಿಯದಮನ ಭಾರ್ಗವ ರೂಪಿಗೆ ನಮೋ

## ಶ್ರೀ ರಾಮ

ಪರಮ ಪಾವನ ನಾಮಾ ಸೀತಾರಾಮನ ದಿವ್ಯನಾಮಾ
ಪರಮ ಕೃಪಾಳು ದಶರಥರಾಮ ಚಿದ್ಘನ ಶ್ಯಾಮ

ಪಿತನ ಮಾತನು ಪರಿಪಾಲಿಸಲು
ಸತಿ ಭ್ರಾತೃವಿನೊಡನೆ ಕಾನನ ಕೈದು
ಹಿತವಾಗಿ ಮುನಿಗಳ ಸಂಗಡದಲ್ಲಿ
ಮತಿವಂತನಾದನು ಜಾನಕಿ ರಾಮನೂ ||೧||

ಸೀತೆಯನಗಲೀ ಕಿಷ್ಕಿಂಧೆಗೈ ತಂದು
ಪ್ರೀತನಾಗುತಲೀ ಕಪಿಗಳ ಭಕ್ತಿಗೆ
ವಾಲಿಯಕೊಂದೂ ಸುಗ್ರೀವನ ಮೆರೆಸೀ
ಬಾಲ ಹನುಮನ್ನ ತೆಗೆದಪ್ಪಿದವನಾ ||೨||

ಶರಧಿಗೆ ಸೇತುವೆ ಕಟ್ಟಿತಾನಪೆದೂ
ದುರುಳ ದಶಕಂಠನ ಶಿರವನು ತರಿದೂ
ಪೊರೆದು ವಿಭೀಷಣನ ಅಯೋಧ್ಯೆಗೆ ಮರಳಿ
ಮೆರೆದ ರಾಮರಾಜ್ಯವ ಶ್ರೀ ರುಕ್ಮಿಣಿ ವರದನಾ ||೩||

ನಾಮವೇ ಜಯ ಜಯ ಶ್ರೀರಾಮ ನಾಮ

## ಶ್ರೀ ಕೃಷ್ಣ

ಗೋಪೀ ಮಾನಸ ಚಕೋರ ಚಂದ್ರಮಾ
ಗೋಪಾಲಬಾಲಾ ನೀಲನೀರದ ಶ್ಯಾಮಾ

ವರ ಯಮುನಾತಟ ಕುಂಜವಿಹಾರೀ
ಸುರಚಿರ ಮುರಳೀಧಾರಿ ಶ್ರೀಹರಿ
ರಾಧಾಮಾಧವಾ ಮಧುಸೂಧನ ಭಂಜನಾ
ನಾದಾಂತರಂಗ ಕೃಷ್ಣ ಪೂತನಾ ಸಂಹರಣಾ ||೧||

ರಾಸಕೇಳೀರತ ಗೋಪಾಲಬಲಯುತಾ
ಶ್ರೀಶ ಗೋಪ ಪರಿವೇಷ್ಠಿತ ಅಗಣಿತ
ಸುಗುಣ ಗಂಭೀರ ತುಳಸೀ ಮಾಲಾಧರಾ
ಜಗವಂದ್ಯ ರುಕ್ಮಿಣಿವರದ ಭಕ್ತಾಧಾರಾ ||೨||
ವಂದೇಹಂ ಶ್ರೀ ಕೃಷ್ಣ ಸುಂದರಮೂರ್ತೇ

## ಬೌದ್ಧರೂಪಿ

ಮಾನಭಂಗವ ಮಾಡಿ ಮತ್ತೆ ಆಸ್ತ್ರೀಯರಾ
ನೇಮವನೆಲ್ಲಾ ಕೆಡಿಸಿದೆ ನೀ ಶ್ರೀಶಾ
ದುರುಳ ರಕ್ಕಸರನ್ನು ತರಿಯಲು ಆಪರಿ
ಸಿರಿರಮಣ ತಾಳಿದೆ ಬೌದ್ಧವೇಷವನು ||೧||

ಕರುಣಾಕರನೆಂಬೊ ನಿನ್ನಯ ಬಿರುದನ್ನು
ಸರಿಯಾಗಿ ಪಾಲಿಸಿ ನಡೆಸುವೆ ಜಗವಾ
ವರದ ರುಕ್ಮಿಣಿಯಾರಾಧಕ ಶ್ರೀನಿವಾಸಾ
ಸರಿಯಾರು ನಿನಗೇ ಕೋಟಿ ದೈವಗಳಲ್ಲಿ ||೨||

ತ್ರಿಪುರಾಂತಕ ಬುದ್ಧಂ ನಮಾಮಿ

## ಕಲ್ಕಿ

ತೇಜಿಯನ್ನೇರುತ್ತ ಮೋಹಿಸುತಮೂಜಗವ
ರಾಜ ಗಂಭೀರಾ ಬರುತಿಹ ಕಲಿಯಲ್ಲಿ ವೀರ ಧೀರಾ ||ಪ||

ಪಟ್ಟೆಪೀತಾಂಬರ ಉಟ್ಟುಶಲ್ಯವ ಹೊದ್ದು
ಕಟ್ಟಾಣಿ ಮುತ್ತಿನ ಮಾಲೆಯು ಧರಿಸೀ|| ಕೊರಳಲ್ಲಿ ಧರಿಸೀ
ಕಸ್ತೂರಿ ತಿಲಕವು ನೊಸಲಲ್ಲಿ ಶೋಭಿಸೆ
ಉತ್ತಮ ಒಡ್ಯಾಣವು ಕಟಿಯನ್ನು ಬಳಸೆ
ಶ್ರೀಶಾ–ಬರುತಿಹ–ಪರಮೇಶಾ ||೧||

ಪರಮೇಷ್ಠಿ ಮೊದಲಾದ ಅಮರರೆಲ್ಲರು
ಸಿರಿರಮಣ ಜಯ ಜಯ ಜಯವೆನ್ನಲು
ನರರು ಕಾದಿರಲು ಬರುವನೆಂದು ಭುವಿಯಲ್ಲಿ
ದುರುಳ ರಕ್ಕಸರೆಲ್ಲ ಗಡಗಡಗಡ ನಡುಗಲು
ಬರುತಿಹ ಶ್ರೀಶಾ-ಶ್ರೀ ವೇಂಕಟೇಶಾ ||೨||

ಕಲಿಮಲಭಂಜನ ದುರಿತ ಪ್ರಭಂಜನ
ಕಲಿಯುಗದಲ್ಲಿ ಖಡ್ಗವ ಹಿಡಿದಲ್ಲಿ
ಭಕ್ತರುದ್ಧಾರಕೆ ಶರವೇಗದಿ ಬರುತಿಹ
ರುಕ್ಮಿಣಿ ವರದಾ ಶರಣರ ಪೊರೆದ

ನೋಡಲ್ಲೀ ಶ್ರೀಶಾ ಶ್ರೀನಿವಾಸಾ

ಮೋಹನ ಕಲ್ಕ್ಯಾವತಾರಕ್ಕೆ ನಮೋ ನಮಃ

## ನಿನ್ನಹೊರತಿನ್ಯಾರೂ

ಜಗದ ಜಂಜಡ ಹರಿಸೇ ನಿನ್ನ ಹೊರತಿನ್ಯಾರೂ
ಖಗಪತಿವಾಹನನೇ ನೀದಯೆ ತೋರುತೋರೂ ||ಪ||

ದೀನಜನ ಬಾಂಧವನೇ ದಾರಿದ್ರ್ಯ ಹರಿಸೂ
ದೀನತೆಯು ಭಾರತದ ನೀನೇ ತೊಲಗಿಸೂ
ಯಾರು ಕಾಯುವರಿಲ್ಲ ನೀನಲ್ಲದೀ ಇಳೆಗೆ
ಮಾರಪಿತ ಬಾರಯ್ಯಾ ಜನ ಹೃದಯದೊಳಗೇ ||೧||

ತೋರಿಕೆಯು ಆಚಾರ ಡಂಭವೆಲ್ಲೆಲ್ಲಿಯೂ
ಬಾರರೈ ನಿನ್ನಂತರಂಗ ಭಕ್ತರು ಹೊರಗೇ

ಎಲ್ಲರಸ ಬೇಕವರ ಶ್ರೀಶ ನೀಪೇಳೂ
ಎಲ್ಲರಂತಿರುವರೇ ಅವರೆಂಬುದನು ಹೇಳೂ ||೨||

ಹೃದಯ ದಾರಿದ್ರ್ಯವೂ ಮೇಲೆ ಹಾಹಾಕಾರಾ
ಸದಯುಳಿಗೆ ಭಾರತಿಗೆ ಘೋರ ಪ್ರಹಾರಾ
ಹಿಂದೆಲ್ಲ ಧರಣಿಯನು ಉದ್ಧರಿಸಲಿಲ್ಲವೆ
ಇಂದೇಕೆ ಮೌನವೋ ರುಕ್ಮಿಣಿಯ ವರದಾ

## ಭಜನ

ನಂದಾನಂದನ ಗೋಪೀಚಂದನ ಸುಂದರ ಕೃಷ್ಣಗೋ ಂದಾ
ಇಂದಿರಾರಮಣ ಚಂದಿರವದನ ಬಂಧುರ ನಯನಾ ಮುಕುಂದಾ ||೧||

ನಂದಕಿಶೋರಾ ಶ್ಯಾಮಲ ಗಾತ್ರ ಗೋಪೀಮಾನಸ ಚಂದ್ರ ಚಕೋರಾ
ಕುಂದರದನ ಹರಿ ಮುಚಕುಂದವದನ ಧೊರಿ
ಕಂಬುಕಂಧರಾ ಸುಕುಮಾರಾ ||೨||

ವನಮಾಲಾಧರಾ ವರಪೀತಾಂಬರ ಶೋಭಿತ ಕಟಿತಟ ಶ್ರೀಶಾ
ಶಂಖ ಚಕ್ರಧರ ಚಾಪ ಶಾರ್ಙ್ಗಧರ ಕರುಣಾಕರ ಶ್ರೀನಿವಾಸಾ ||೩||

ಅಮರಾದಿವಂದಿತ ಮುನಿಜನಸೇವಿತ ಭಕ್ತಜನ ಸುತ್ರಾಣಾ
ಕಮನೀಯ ವಿಗ್ರಹ ಸಾಮಗಾನ ಪ್ರಿಯ ಭವಬಂಧನ ನಾಶಾ ||೪||

ನಾರದಲೋಲಾ ಗಾನಲೋಲಾ ಶೈಲವಾಸ ಶ್ರೀ ರುಕ್ಮಿಣಿ ವರದಾ
ಭಾರತಗೀತಾ ಅಮೃತ ವರ್ಷಿತ ಪಾಂಡವಪಾಲಾ ವೆಂಕಟೇಶಾ ||೫||

## ಭಜನ್

ಜೈ ಶ್ರೀನಿವಾಸ ಶ್ರೀನಿವಾಸ ಶ್ರೀನಿವಾಸಂ ಭಜೇ
ರಾಮಕೃಷ್ಣ ಸರ್ವರೂಪ ಶ್ರೀಶನಾಮಂ ಭಜೇ
ಪದ್ಮಿನೀ ಮೋಹನಂ ರುಕ್ಮಿಣೀ ಪಾಲಕಂ
ಯಾದವೇಂದ್ರ ನಂದನಂದನ ರಾಧಾ ಮಾಧವಂ

## ಭಜನ್

ನಾರಾಯಣ ಹರಿ ಗೋವಿಂದಾ ಶ್ರೀ ಗಿರಿವಾಸಾ ಗೋವಿಂದಾ
ಸಾಧು ಜನ ಪೋಷಾ ಗೋವಿಂದಾ ಮಾಧವ ಮುರಹರ ಗೋವಿಂದಾ ||೧||

ಮತ್ಸ್ಯ ಕೂರ್ಮಹರಿ ಗೋವಿಂದಾ ವರಾಹ ನರಹರಿ ಗೋವಿಂದಾ
ವಾಮನ ಭಾರ್ಗವ ಗೋವಿಂದಾ ರಾಮಕೃಷ್ಣ ಬುದ್ಧ ಗೋವಿಂದಾ ||೨||

ಮೋಹನ ಕಲ್ಕೀ ಗೋವಿಂದಾ ಮೋಹನ ಮುರಳೀ ಗೋವಿಂದಾ
ಭಕ್ತಜನರಕ್ಷಾ ಗೋವಿಂದ ರುಕ್ಮಿಣಿವರದ ಗೋವಿಂದ ||೩||

## ಭಜನ್

ಶ್ರೀ ಶೈಲಾಧಿಪ ಶ್ರೀನಿವಾಸಾ
ಮುನಿಜನ ಪೂಜಿತ ಗಿರಿವಾಸಾ
ಶಾಂತಾಕಾರಾ ಶ್ರೀನಿವಾಸಾ
ಆತ್ಮಾನಂದಾ ಶ್ರೀ ಗಿರಿವಾಸಾ

ಪರಮಾನಂದಾ ಶ್ರೀನಿವಾಸಾ
ಪುಣ್ಯಸ್ವರೂಪಾ ಗಿರಿವಾಸಾ
ಸಚ್ಚಿದಾನಂದ ಶ್ರೀನಿವಾಸಾ
ರುಕ್ಮಿಣಿವರದಾ ಗಿರಿವಾಸಾ

## ಭಜನ್

ಪರಮ ಪುರುಷ ಪಾಹಿಮಾಂ ಗರುಡಗಮನ ರಕ್ಷಮಾಂ
ಉರಗ ಶಯನ ಪಾಹಿಮಾಂ ಕರುಣ ಪೂರಣ ರಕ್ಷಮಾಂ ||೧||
ವೇಣುಲೋಲ ಪಾಹಿಮಾಂ ಜಾಣಕೃಷ್ಣ ರಕ್ಷಮಾಂ
ಶೈಲವಾಸಾ ಪಾಹಿಮಾಂ ಕಾಲರೂಪ ರಕ್ಷಮಾಂ ||೨||
ಶರಣವತ್ಸಲ ಪಾಹಿಮಾಂ ಧರಣಿಪಾಲಕ ಪಾಹಿಮಾಂ
ನರನ ಸಾರಥಿ ಪಾಹಿಮಾಂ ವರದ ರುಕ್ಮಿಣಿ ರಕ್ಷಮಾಂ ||೩||

ಹರಿನಾರಾಯಣ ಜಯನಾರಾಯಣ
ಜಯ ಜಯ ಜಯಜಯ ಶ್ರೀನಿವಾಸಾ
ಜಯನಾರಾಯಣ ಹರಿನಾರಾಯಣ
ಜಯ ರುಕ್ಮಿಣಿವರದಾ ಗಿರಿವಾಸಾ

ಹೇ ಗಿರಿವಾಸಾ ಆನಂದದಾಯಕಾ
ರಾಧಾಮಾಧವ ಗೋವಿಂದ
ಹೇ ಶೈಲಾಧಿಪ ತ್ರಿಭುವನ ಮೋಹನಾ
ರುಕ್ಮಿಣಿವರದಾ ಗೋವಿಂದಾ

ಜೈ ವೆಂಕಟೇಶ ವೆಂಕಟೇಶ ವೆಂಕಟೇಶ ಪಾಹಿಮಾಂ
ಜೈ ಶ್ರೀನಿವಾಸ ಶ್ರೀನಿವಾಸ ಶ್ರೀನಿವಾಸ ರಕ್ಷಮಾಂ
ತಿಂತ್ರಿಣೀ ಮೂಲವಾಸ ವೆಂಕಟೇಶ ಪಾಹಿಮಾಂ
ಕಂತುಪಿತ ರುಕ್ಮಿಣಿವರದ ದೇವ ರಕ್ಷಮಾಂ

ಗೋವಿಂದ ಗೋವಿಂದ ಹರೇ ಮುರಾರೇ
ಆನಂದ ಆನಂದ ನಿನ್ನಯ ನಾಮ ಕಂಸಾರೇ
ಆನಂದ ಆನಂದ ರುಕ್ಮಿಣೀ ವರದ ಶ್ರೀಹರೇ
ಗೋವಿಂದ ಗೋವಿಂದ ಗೋವಿಂದ ಹರೇ ಮುರಾರೇ

## ಲಾಲಿ

ಶ್ರೀನಿವಾಸನೆ ಮಲಗೂ ಶ್ರೀ ಗಿರಿವಾಸಮಲಗೂ
ಭಾನು ಸ್ವರೂಪನೇ ಚಿನ್ಮಯನೆ ಮಲಗೂ

ದಶವಿಧದ ರೂಪದಿಂ ಧರ್ಮಸ್ಥಾಪನೆಗೈದು
ಕುಶಲವನ್ನಿತ್ತು ನೀ ಯುಗಯುಗದಿ ಜನಕೇ
ಬಳಲಿರುವೆ ಬಲು ಶ್ರೀಶ ವಿಶ್ರಾಂತಿಯನು ಪೊಂದು
ನಳಿನನಾಭನೆ ಶ್ರೀ ರುಕ್ಮಿಣೀವರದ ಮಲಗೂ ॥೧॥
ಲಾಲೀ ....

---

## ಫಲಶ್ರುತಿ

ಬಳಸಿ ನೀನೀ ಕರಣವನು ನಿನ್ನ ಲೀಲೆಗೆ
ಹೊಳಪಿನಿಂ ಬೆಳಗಿಸುತ ನಿನ್ನ ದಿವ್ಯಾರಾಧನೆಗೆ

ನೂರೆಂಟು ಪುಷ್ಪಗಳ ಮಾಲಿಕೆಯು ಮಾಡಿ
ತಾರೆಂದು ಧರಿಸಿರುವೆ ರುಕ್ಮಿಣೀ ವರದಾ ||೧||

ನೀನೇ ಕಾರಣಕರ್ತ ಕರಣಮಾತ್ರವು ಜೀವ
ನೀನೇ ಜಗದ್ಬಂಧು ಮಾತಾಪಿತೃಗಳು ಸಕಲಾ
ನಿನ್ನಿಚ್ಛೆಯೇ ನನ್ನಿಚ್ಛೆ ಬೇರೆಂಬುದಿಲ್ಲವೋ
ನಿನ್ನಣುವು ನಾನಯ್ಯ ಶ್ರೀ ರುಕ್ಮಿಣೀ ವರದಾ ||೨||

ಮಂಗಳವು ಜಗಕ್ಕೆಲ್ಲ ಮಂಗಳವು ಜನತೆಗೆ
ಮಂಗಳವು ಹೇರಂಗ ನೂರೆಂಟು ಪದಗಳಿಗೆ
ಹಿಂಗದಲೆ ಭಾಗ್ಯಗಳ ಕರುಣಿಸನು ಶ್ರೀಶ
ತುಂಗಮಹಿಮನು ಈ ನಾಮ ಬರೆದು ಓದಿದ ಜನಕೆ ||೩||

ಭದ್ರಂ-ಶುಭಂ-ಮಂಗಳಂ
ಶ್ರೀ ಕೃಷ್ಣಾರ್ಪಣಮಸ್ತು

## ಮಂಗಳಂ

ಜಯ ಮಂಗಳಂ ನಿತ್ಯ ಶುಭಮಂಗಳಂ ||ಪ||
ಶ್ರೀ ಗಿರಿಯವಾಸಗೇ ಶ್ರೀ ಶ್ರೀನಿವಾಸಗೇ ||ಅ||ಪ||

ಪಟ್ಟೆ ಪೀತಾಂಬರವನುಟ್ಟು ನಿಂದಿಹ ಧೀರಾ
ಮೆಟ್ಟಿ ದುಷ್ಕರ್ಮಗಳ ಪೊರೆಯುವಾ ಶೂರಾ
ರಾಜ ಗಂಭೀರ ಮಹಾರಾಜ ತೇಜೋಮೂರ್ತಿ
ರಾಜತಾನನ ಕಮಲ ನಯನ ನಳಿನಕ್ಕೆ ||೧||

ದೂರದಿಂದಲಿ ಬಂದು ಗಿರಿಯಲ್ಲಿ ನಿಂದು
ದಾರಿಗರ ಬಳಿಯಿಂದ ಹಣವಳೆಸಿಕೊಂಡು
ಶಿರಿದೇವಿ ಪದ್ಮಿನಿಯು ವಕ್ಷದಲಿಕೊಂಡು
ಕರುಣೆ ತೋರುತಲಿರುವ ರುಕ್ಮಿಣೀವರದಗೆ ||೨||

———



ಶ್ರೀಮತಿ ರುಕ್ಮಿಣಿ ಗಿರಿಮಾಜಿ ಎಂ.ಎ.,

ಕನ್ನಡ ಸಾಹಿತ್ಯದಲ್ಲಿ ತಮ್ಮ ಕಥೆ, ವಿಚಾರ ಸಾಹಿತ್ಯ, ಪ್ರಬಂಧ ಪ್ರವಾಸ ಸಾಹಿತ್ಯ, ಹಾಗೂ ಧಾರ್ಮಿಕ ಲೇಖನಗಳ ಮೂಲಕ ಚಿರಪರಿಚಿತರಾಗಿರುವ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರು ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಅಧ್ಯಯನ, ಅಭ್ಯಾಸ, ಅಭಿವ್ಯಕ್ತಿಗಳನ್ನು ಸಾಧಿಸಿ, ಸಾಹಿತ್ಯಿಕ-ಸಾಂಸ್ಕೃತಿಕ ರಂಗಕ್ಕೆ ಉತ್ತಮ ಕಾಣಿಕೆಯನ್ನು ನೀಡಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ರಾಜ್ಯದ ಆದರ್ಶ ಅ[illegible]ರಾಗಿ, ಧಾರ್ಮಿಕ ಕ್ಷೇ[illegible] ಅಖಿಲ ಭಾರತ ಮಾಧ್ವ [illegible]ಹಾ ಮಂಡಲದ ಉಪಾಧ್ಯಕ್ಷರಾಗಿ, ಪತ್ರಿಕೋದ್ಯಮದಲ್ಲಿ ತತ್ವವಾದದಂತಹ ರಾಷ್ಟ್ರಖ್ಯಾತಿ ಪತ್ರಿಕೆಯ ಸಂಪಾದಕೀಯ ಮಂಡಲಿಯಲ್ಲಿದ್ದು ಸಮಾಜ ಸೇವೆಯ ನಾನಾ ಮುಖಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಮತಿ ಗಿರಿಮಾಜಿ ಅನೇಕ ಸಂಘ ಸಂಸ್ಥೆಗಳ ಉದ್ದೀಪಕ ಶಕ್ತಿಯಾಗಿದ್ದಾರೆ. ಸೂಕ್ಷ್ಮ ಪ್ರಜ್ಞೆಯ, ಪ್ರಾಮಾಣಿಕ ಕಳಕಳಿಯ ಶ್ರೀಮತಿ ಗಿರಿಮಾಜಿಯವರು 'ರುಕ್ಮಿಣೀವರದ' ಕೃತಿಯ ಮೂಲಕ, ಪ್ರಸ್ತುತ ಹರಿದಾಸ ಸಾಹಿತ್ಯದಲ್ಲಿ ಉತ್ತಮ ಕೃತಿ ರಚನೆ ಸಾಧ್ಯವಿದೆಯೆಂಬ ಮಾತನ್ನು ನಿಜವಾಗಿಸಿ, ಸಾಹಿತ್ಯ, ಸಂಗೀತಗಳ ಸಹಸ್ಪಂದನವನ್ನು ಪ್ರಭಾವಪೂರ್ಣವಾಗಿ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕನ್ನಡ ಧಾರ್ಮಿಕ ಸಾಹಿತ್ಯದಲ್ಲಿ ಮಹಿಳೆಯರ ಪ್ರಮುಖ ಪಾತ್ರವನ್ನು ಮತ್ತೆ ನೆನಪಿಗೆ ತರಬಲ್ಲ ಈ ಕೃತಿ ಇತ್ತೀಚಿನ ಹರಿದಾಸ ಸಾಹಿತ್ಯ ಕೃತಿಗಳಲ್ಲೆಲ್ಲಾ ಅತ್ಯಂತ ಮಹತ್ವಪೂರ್ಣವಾದುದಾಗಿದ್ದು, ಈ ಮೂಲಕ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರು ಹರಿದಾಸ ಸಾಹಿತ್ಯಕ್ಕೆ, ವಿಶಾಲ ಅರ್ಥದಲ್ಲಿ ಇಡೀ ಕನ್ನಡ ಸಾಹಿತ್ಯ ಸಂಸ್ಕೃತಿ ರಂಗಗಳಿಗೆ ಅತ್ಯುತ್ತಮ ಭರವಸೆಯನ್ನು ತಂದಿದ್ದಾರೆ.

—ಅರಳುಮಲ್ಲಿಗೆ ಪಾರ್ಥಸಾರಥಿ